ಮುಂಬಯಿ ವಿದ್ಯಾಖಾತೆಯವರಿಂದ ಪಠ್ಯಪುಸ್ತಕವೆಂದು ಮಂಜೂರಾಗಿದೆ.

# ಸಾಹಿತ್ಯ ವಿಹಾರ

## ಪುಸ್ತಕ ೨



ಶಿಕ್ಷಣ ಪ್ರಚಾರ ಸಾಹಿತ್ಯ ಸಮಿತಿ
ವಿಜಯಪುರ

# ಸಮ್ಮನಮಾತು

ಶಿಕ್ಷಣ ಪ್ರಚಾರ ಸಾಹಿತ್ಯ ಸಮಿತಿಯ ಮೊದಲನೆಯ ಪ್ರಕಟನೆಯಾಗಿ ಈ ಪುಸ್ತಕವು ಇದೀಗ ಹೊರಬಂದಿದೆ. ಅನೇಕ ಮುಖವಾಗಿ ಬೆಳೆಯುತ್ತಿರುವ ಕನ್ನಡ ಸಾಹಿತ್ಯದ ಪರಿಚಯ ವಿದ್ಯಾರ್ಥಿಗಳಿಗೆ ಆಗುವುದು ಇಂಥ ಸಂಕಲನ ಗ್ರಂಥಗಳ ಅಭ್ಯಾಸದಿಂದಲೇ ಎಂದು ಹೇಳುವ ಆವಶ್ಯಕತೆಯಿಲ್ಲ. ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ಪ್ರಯತ್ನಗಳು ಒಂದೆರಡಾಗಿದ್ದರೂ ವ್ಯವಸ್ಥಿತವಾದ ಅಭ್ಯಾಸಕ್ಕಾಗಿ ಒಂದು ಕ್ರಮವಿಡಿದು ಕಾರ್ಯವಾಗಿಲ್ಲವೆನ್ನಬಹುದು. ಈ ದೃಷ್ಟಿಯಿಂದ ನಾವು ಮೂರು ಸಂಕಲನ ಗ್ರಂಥಗಳ ಯೋಜನೆಯನ್ನಿಟ್ಟುಕೊಂಡಿದ್ದು ಅದರಲ್ಲಿ ಈಗ ಪ್ರಕಟವಾಗಿರುವುದು ಎರಡನೆಯದು. ಮೊದಲನೆಯ ಮತ್ತು ಮೂರನೆಯ ಪುಸ್ತಕಗಳನ್ನು ಬೇಗನೆ ಹೊರಡಿಸುವ ಏತ್ತುಗಡೆಯನ್ನು ಮಾಡುತ್ತಿದ್ದೇವೆ. ವಿಷಯ-ವೈವಿಧ್ಯತೆ, ಶೈಲಿಯ ಸೊಬಗು, ವಿಚಾರ ಸುಗಮತೆ ಮುಂತಾದ ದೃಷ್ಟಿಯಿಂದ ಭಾಷಾಭ್ಯಾಸಕ್ಕೆ ಅನುಗುಣವಾಗುವಂತೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಸ್ಥಾನವನ್ನು ಗಳಿಸಿದವರ ಬರಹಗಳನ್ನೇ ಇಲ್ಲಿ ಆರಿಸಲಾಗಿದೆಯೆಂಬುದನ್ನು ಓದುಗರು ಕಾಣಬಹುದು. ವಿದ್ಯಾರ್ಥಿಗಳಿಗೆ ವಿಶೇಷವಾಗಿ ಶಿಕ್ಷಕರಿಗೆ ಅನುಕೂಲವಾಗುವಂತೆ ಪ್ರತಿಯೊಂದು ಪಾಠಕ್ಕೆ ಅಭ್ಯಾಸವನ್ನು ಜೋಡಿಸಲಾಗಿದೆ. ಇದರಿಂದ ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಅಭಿರುಚಿ, ಆಳವಾದ ಅಭ್ಯಾಸದ ಪ್ರವೃತ್ತಿ, ವಿಮರ್ಶನಶಕ್ತಿ ಮೊದಲಾದವುಗಳು ಬೆಳೆಯಲು ಸಹಾಯವಾಗುವುದೆಂದು ನಾವು ನಂಬಿದ್ದೇವೆ.

ಲೇಖಕರ ಪರಿಚಯದ ಬಗ್ಗೆ ಒಂದೆರಡು ಮಾತನ್ನು ಇಲ್ಲಿ ಹೇಳುವುದು ಅವಶ್ಯವಾಗಿದೆ. ಪರಿಚಯವನ್ನು ಬರೆಯುವಾಗ ಅವರ ಸಾಹಿತ್ಯ-ನಿರ್ಮಾಣ ಕಾರ್ಯವನ್ನು ಹೆಚ್ಚಾಗಿ ಲಕ್ಷಿಸಿ

ಅದರ ರೂಪರೇಷೆಯನ್ನು ಮಾತ್ರ ಕೊಡಲಾಗಿದೆ. ಅವರ ವ್ಯಕ್ತಿತ್ವದ ಚಿತ್ರವನ್ನು ಕೊಡುವರೀತಿ ಅಲ್ಲಲ್ಲಿ ತೋರಿದರೂ, ಅದು ಆನುಷಂಗಿಕವಾಗಿ ಬಂದುದು. ಈ ಎರಡು ಮಾತುಗಳಲ್ಲಿ ನ್ಯೂನತೆ ಉಂಟಾಗಿದ್ದರೆ, ಆ ಬಗ್ಗೆ ಲೇಖಕರ ಕ್ಷಮೆಯನ್ನು ಈ ಮೂಲಕವಾಗಿ ಬೇಡುತ್ತೇವೆ. ಸಾಹಿತ್ಯ-ಸಂಕಲನಗಳಲ್ಲಿ ಈ ರೀತಿಯ ಪರಿಚಯದ ಪ್ರಯತ್ನವು ಸಾಹಿತ್ಯ ವಿಮರ್ಶೆಯಲ್ಲಿಯ ಒಂದು ಬಗೆ ಎಂದು ಮಾತ್ರ ಹೇಳದಿರೆವು.

ಈ ಹೊತ್ತಿಗೆಯನ್ನು ಕಲಿಸಬೇಕಾಗುವ ಕನ್ನಡ ಶಿಕ್ಷಕರಲ್ಲಿ ನಾವು ಬೇಡುವದಿಷ್ಟೆ. ಪಾಠಗಳ ಸಂಯೋಜನೆ, ಅಭ್ಯಾಸ ಮೊದಲಾದವುಗಳಲ್ಲಿ ಏನಾದರೂ ಲೋಪದೋಷಗಳು ತೋರಿದಲ್ಲಿ ನಮಗೆ ದಯವಿಟ್ಟು ತಿಳಿಸಬೇಕು. ಹೀಗೆ ಮಾಡಿದಲ್ಲಿ ಮುಂದೆ ಹೊರಡಲಿರುವ ಪುಸ್ತಕಗಳಲ್ಲಿಯೂ, ಮತ್ತು ಪ್ರಸ್ತುತ ಗ್ರಂಥದ ದ್ವಿತೀಯಾವೃತ್ತಿಯಲ್ಲಿಯೂ ಅವುಗಳನ್ನು ಲಕ್ಷಿಸಲಾಗುವುದು.

ಈ ಸಂಗ್ರಹವು ಮಾಧ್ಯಮಿಕ ಶಾಲೆಗೆ ಐದನೆಯ ವರ್ಗಕ್ಕೂ, ಕನ್ನಡ ಟ್ರೇನಿಂಗ ಕಾಲೇಜುಗಳ ಮೊದಲನೆಯ ವರ್ಗಕ್ಕೂ, ಲೋಕಶಾಲೆಗಳ ಎರಡನೆಯ ವರ್ಗಕ್ಕೂ ಉಪಯೋಗವಾದೀತೆಂದು ಆಶಿಸಲಾಗಿದೆ. ಆಯಾ ವರ್ಗಗಳ ಶಿಕ್ಷಕರ ಅನುಭವವೇ ನಮಗೆ ಮುನ್ನೋಟಕ್ಕೆ ಬೆಳಕಾಗಬೇಕು.

ವಿವಿಧ ವಿಷಯಗಳ ಮೇಲೆ ಕನ್ನಡದಲ್ಲಿ ಹೊತ್ತಿಗೆಗಳನ್ನು ಪ್ರಕಟಿಸಬೇಕೆಂದು ಈ ಸಮಿತಿಯು ಉದ್ದೇಶವನ್ನಿಟ್ಟುಕೊಂಡಿದೆ. ಶಿಕ್ಷಕರಾಗಿ ಕೆಲಸ ಮಾಡುತ್ತ ತಮ್ಮ ಕಾರ್ಯಕ್ಷೇತ್ರದಲ್ಲಿರುವ ಕೊರತೆಗಳನ್ನು ತಾವೇ ನೀಗಿಸಿಕೊಳ್ಳಲು ಮಾಡುತ್ತಿರುವ ಪ್ರಯತ್ನದ ಫಲವೆ ಈ ನಮ್ಮ ಸಮಿತಿಯ ನಿರ್ಮಾಣ. ಶಿಕ್ಷಕ ಬಂಧುಗಳೆಲ್ಲ ನಮ್ಮ ಕಾರ್ಯಕ್ಕೆ ನೆರವನ್ನೀಯುವರೆಂದು ಆಶಿಸುತ್ತೇವೆ.

ಈ ಸಂಕಲನ ಗ್ರಂಥದಲ್ಲಿ ತಮ್ಮ ಬರಹಗಳನ್ನು ಸೇರಿಸಲು ಅನುಮತಿ ಕೊಟ್ಟ ಎಲ್ಲ ಲೇಖಕರಿಗೆ, ಮತ್ತು ಸರಿಯಾದ ವೇಳೆಗೆ ಅಂದವಾಗಿ ಅಚ್ಚು ಹಾಕಿಕೊಟ್ಟ ಶ್ರೀ. ವ್ಹಿ. ಬಿ. ನಾಯಕ, ಹಾಗೂ ರಾ ಬ. ಹಳಕಟ್ಟಿಯವರಿಗೆ, ನಾವು ಉಪಕೃತರಾಗಿದ್ದೇವೆ. ಈ ಹೊತ್ತಿಗೆಯು ತೀವ್ರ ಪ್ರಕಟವಾಗಲು ಎಲ್ಲ ರೀತಿಯಿಂದ ಸಹಾಯ ಮಾಡಿದ ಶ್ರೀ. ಬಾಡಗಂಡಿ ಶಾಮರಾಯರ, ಹಾಗೂ ಇನ್ನಿತರ ಗೆಳೆಯರ ಉಪಕಾರವನ್ನು ಸ್ಮರಿಸದೆ ಇರಲಾರೆವು.

ಶಿಕ್ಷಕ ಬಂಧುಗಳ, ವಿದ್ಯಾರ್ಥಿಗಳ ಮತ್ತು ಕನ್ನಡ ಅಭ್ಯಾಸಿಗಳ ಕೈಯಲ್ಲಿ ಪ್ರಯತ್ನಪೂರ್ವಕವಾಗಿ ಆಯ್ದು ಸರಿಗೊಳಿಸಿದ ಸಾಹಿತ್ಯ-ಫಲಗಳ ಈ ಸಂಗ್ರಹವನ್ನು ಇರಿಸುತ್ತೇವೆ. ಅದರ ಸವಿಯ ಆನಂದದಿಂದ ಸಾಹಿತ್ಯದ ಅಭ್ಯಾಸದಲ್ಲಿ ಹೊಸ ರುಚಿಯು ತೋರಿದರೆ ನಮ್ಮ ಕಾರ್ಯ ಸಾರ್ಥಕವಾಯಿತೆಂದು ತಿಳಿದುಕೊಳ್ಳುತ್ತೇವೆ.

**ಸಂಪಾದಕರು**

---

# ಎರಡನೆಯ ಮುದ್ರಣ

ಮುಂಬಯಿ ಸರಕಾರದ ವಿದ್ಯಾಖಾತೆಯವರು ಈ ಪುಸ್ತಕ ವನ್ನು ಮಾಧ್ಯಮಿಕ ಶಾಲೆಗಳಿಗೆ ಪಠ್ಯಪುಸ್ತಕವಾಗಿ ಮಂಜೂರ ಮಾಡಿದ್ದಾರೆಂದು ತಿಳಿಸಲು ಆನಂದವಾಗುತ್ತದೆ. ಇದನ್ನು ತಮ್ಮ ಹೈಸ್ಕೂಲುಗಳ ವರ್ಗಗಳಲ್ಲಿ ಪಠ್ಯಪುಸ್ತಕವಾಗಿ ಹಚ್ಚಿದ ವಿಜಾ-ಪುರ, ಧಾರವಾಡ ಮತ್ತು ಬೆಳಗಾಂವ ಮಾಧ್ಯಮಿಕ ಮುಖ್ಯಾ-ಧ್ಯಾಪಕರ ಮಂಡಳದವರಿಗೆ ನಮ್ಮ ಕೃತಜ್ಞತೆಗಳು.

ಈ ಮುದ್ರಣದಲ್ಲಿ ಪಠ್ಯಪುಸ್ತಕ ಸಮಿತಿಯವರು ಸೂಚಿಸಿ ದಂತೆ ಮಾರ್ಪಾಟುಗಳನ್ನು ಮಾಡಲಾಗಿದೆಯಲ್ಲದೆ, ನಮ್ಮ ತೊಂ ದರೆಗಳನ್ನು ಲಕ್ಷಿಸದೆ ಇದರ ಬೆಲೆಯನ್ನೂ ಇಳಿಸಲಾಗಿದೆ. ಮುದ್ರಣ ದೋಷಗಳನ್ನು ಕಡಿಮೆ ಮಾಡಲು ಎಷ್ಟು ಪ್ರಯತ್ನ ಮಾಡಿ ದರೂ ಹಲವು ದೋಷಗಳು ಅನಿವಾರ್ಯವಾಗಿ ಉಳಿದುದಕ್ಕೆ ನಾವು ಓದುಗರ ಕ್ಷಮೆಯನ್ನು ಕೋರುತ್ತೇವೆ.

ಇಷ್ಟು ಬೇಗ ಈ ಮುದ್ರಣವನ್ನು ಹೊರಡಿಸಬೇಕಾದೀ ತೆಂದು ನಾವು ಬಗೆದಿರಲಿಲ್ಲ. ಇದಕ್ಕೆ ತಮ್ಮ ಸಹಾನುಭೂತಿ ಯಿಂದಲೂ, ಸಲಹೆ ಸೂಚನೆಗಳಿಂದಲೂ ಪ್ರೋತ್ಸಾಹನೆಯನ್ನಿತ್ತ ನಮ್ಮ ಶಿಕ್ಷಕ ಮಿತ್ರರೆಲ್ಲರಿಗೆ ನಾವು ತುಂಬಾ ಋಣಿಯಾಗಿದ್ದೇವೆ.

ದ್ವಿತೀಯ ಮುದ್ರಣವನ್ನು ಅತ್ಯಂತ ಅಲ್ಪ ಕಾಲದಲ್ಲಿ ಅಚ್ಚುಕಟ್ಟಾಗಿ ಮಾಡಿಕೊಟ್ಟ "ಪ್ರಕಾಶ" ಮುದ್ರಣಾಲಯದ ಸಂಚಾಲಕರಾದ ಶ್ರೀ. ವ್ಹಿ. ಎನ್. ಗುಡಗುಂಟಿಯವರಿಗೆ ನಾವು ಉಪಕೃತರಾಗಿದ್ದೇವೆ. ಬೇರೆ ಬೇರೆ ಬಗೆಯಿಂದ ನಮಗೆ ಸಹಾಯ ವನ್ನಿತ್ತ ನಮ್ಮ ಉಳಿದ ಮಿತ್ರರಿಗೂ ನಾವು ಆಭಾರಿಯಿದ್ದೇವೆ.

**ಸಂಪಾದಕರು**

# ಪರಿವಿಡಿ

# ಠಕ್ಕರ್ ಬಾಪಾ



ಠಕ್ಕರ್ ಬಾಪಾಗೆ ೭೦ ವರ್ಷವೆಂದು ಹೇಳಿದರೆ ಎಷ್ಟೋ ಜನ ನಂಬಲಿಕ್ಕಿಲ್ಲ; ಅವರನ್ನು ನೋಡಿದವರು ಯಾರೂ ಈ ಮಾತು ನಂಬುವದೇ ಇಲ್ಲ. ಅವರೊಡನೆ ಹಗಲಿರುಳು ಕೆಲಸ ಮಾಡುವ ಜನರಿಗೂ ಕೂಡ ಅವರ ವಯಸ್ಸು ಇಷ್ಟಿರಬಹುದೆಂಬ ಅನುಮಾನವೇ ಬಂದಿರಲಿಲ್ಲ. ಬಾಪಾಗೆ ಅಂಥ ಮೈಕಟ್ಟಿದೆ; ಅಂಥ ಮುಖಮುದ್ರೆಯಿದೆ. ತಮ್ಮ ವಯಸ್ಸನ್ನು ಮರೆತು ಮರೆಯಿಸಲು ಎಲ್ಲರಿಗೂ ಸಾಧ್ಯವಿಲ್ಲ. ಕೆಲವರು ತಮ್ಮ ಮನಸ್ಸನ್ನು ಪಳಗಿಸಿ ಕೊಳ್ಳಬಲ್ಲರು; ಆದರೆ ಮೈಯನ್ನೂ ಹಾಗೇ ಕಾಪಾಡಿಕೊಳ್ಳಲು ಕೊಂಚಮಟ್ಟಿಗೆ ಪ್ರಕೃತಿಯ ಸಹಾಯವೂ ಬೇಕು. ಮೈಯಿಂದ ಅಜರರಾದ ಭಾಗ್ಯಶಾಲಿಗಳೂ ಉಂಟು, ಮನಸ್ಸಿನಿಂದ ನಿರ್ಜರ ರಾದ ಪುಣ್ಯಜೀವಿಗಳೂ ಉಂಟು. ಇವೆರಡನ್ನೂ ಪಡೆದ ಜೀವಿ

ಗಳು ಬಹಳ ಕಡಿಮೆ. ಠಕ್ಕರ್ ಬಾಪಾ ಅಂಥವರಲ್ಲಿ ಒಬ್ಬರು. ಅವರ ತಿಳಿಗೊಳದಂಥ ಮುಖ, ಅದರಲ್ಲಿ ಆತ್ಮಸೂರ್ಯನ ಪ್ರತಿ ಬಿಂಬವಂತೆ ಹೊಳೆವ ಕಣ್ಣು, ಅಲೆಗಳ ಹೊಯ್ದಾಟವಿಲ್ಲದೆ ಶಾಂತ ವಾದ ಕಡಲಿನ ಉಸಿರಿನಂಥ ಅವರ ಮಾತು, ಎಂದಿಗೂ ಮರೆ ಯುವಂತಿಲ್ಲ.

ಬಾಪಾರ ಈ ನಿರ್ಜರತೆಯ ಗುಟ್ಟು ಅವರ ಕರ್ಮಜೀವನ ದಲ್ಲಿದೆ. ಅವರಿಗೆ ಕೆಲಸ ಮಾಡುವುದೆಂದರೆ ಅದೊಂದು ಬಗೆಯ ಹುಚ್ಚು ಹುಮ್ಮಸ್ಸು. ಈ ವಯಸ್ಸಿನಲ್ಲೂ ತಮ್ಮ ಬಟ್ಟೆಬರೆಗಳನ್ನು ತಾವೇ ಮಡಿಮಾಡಿಕೊಳ್ಳುವದರಲ್ಲಿ ಬೇಸರವಿಲ್ಲ. ಸಂಬಳಕ್ಕಾಗಿ ದುಡಿಯುವವರಿಗೂ ಒಂದು ಬಿಡುವಿನ ದಿನವುಂಟು. ಗಿರಣಿಯ ಕೂಲಿಕಾರರಿಗೂ ದಿನಕ್ಕೆ ಇಷ್ಟೇಗಂಟೆ ದುಡಿತವೆಂಬ ನಿಯಮವಿದೆ. ಸೇವೆಯೇ ಜೀವನವೆಂದು ತಿಳಿದಿರುವ ಬಾಪಾರಂಥ ಜನರಿಗೆ ಎರಡೂ ಇಲ್ಲ. ವರ್ಧಾದಿಂದ ಸೇವಾಗ್ರಾಮಕ್ಕೆ ಗಾಂಧೀಜಿಯನ್ನು ನೋಡಲಿಕ್ಕೆ ಹೋಗಬೇಕಾದಾಗ ಟಾಂಗಾ ಸಿಕ್ಕರೆ ಸರಿ ; ಇಲ್ಲದಿ ದ್ದರೆ ಕಾಲುಗಾಡಿ ಇದ್ದೇ ಇದೆಯಲ್ಲ. ಗಾಂಧೀಜೀ ಒಮ್ಮೆ ಹೇಳಿ ದಂತೆ; ' ಬಾಪಾ, ಕೆಲವು ದಿನದ ತನಕ ನೀವು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಬಾರದೆ ? ' ಒಡನೆಯೇ ಬಾಪಾ ಹೇಳಿದರು: 'ಬಾಪು ಇನ್ನೂ ಎಷ್ಟು ಕೆಲಸ ಹಾಗೇ ಬಿದ್ದಿದೆ, ನಾನು ಹೇಗೆ ವಿಶ್ರಾಂತಿ ತೆಗೆದುಕೊಳ್ಳಲಿ? ಆ ಕೆಲಸ ಮಾಡುತ್ತ ಹೋಗುವುದರಲ್ಲೇ ನನಗೆ ವಿಶ್ರಾಂತಿಯ ಸುಖ ಸಿಗುತ್ತದೆ. ' ತಮ್ಮ ಕೆಲಸದಲ್ಲಿ ಅಷ್ಟು ಆನಂದ, ಉತ್ಸಾಹ, ಅವರಿಗೆ! ದುಡಿತವನ್ನು ಈ ಬೆಳಕಿನಲ್ಲಿ ಕಂಡವರು ಕೋಟಿಗೊಬ್ಬರಾದರೂ ಇದ್ದಾರೆಯೋ ಇಲ್ಲವೋ ?

ಬರೀ ಹುಚ್ಚು ಹುಚ್ಚು ದುಡಿತವಲ್ಲ ಬಾಪಾರದು. ಅದ ರಲ್ಲೂ ಒಂದು ಅರ್ಥವಿದೆ; ರೀತಿಯಿದೆ. ಯಾವ ಯಾವ ಕೆಲಸ ವನ್ನು ಯಾವಾಗ ಮಾಡಬೇಕೆಂಬುದರ ಕ್ರಮವಿದೆ. ಇಂದಿನ ಕೆಲಸ ಇಂದೇ ಮುಗಿಸಿಬಿಡುವ ಸಂಕಲ್ಪವಿದೆ. ಯಾವುದನ್ನೂ ನಾಳೆಗೆ

ತಪ್ಪಿಸಿಹಾಗಿಲ್ಲ. ಲೆಕ್ಕದಲ್ಲಿ ಬಾಪಾ ಬಹಳ ಜಾಗರೂಕರು. ಸಂಸ್ಥೆಗಳ ಹಣದ ವಿಷಯದಲ್ಲಿ ಅವರ ಕಣ್ಣು ಬಹಳ ಮೊನೆಯಾದುದು. ತಮ್ಮ ದಿನಚರಿಯನ್ನು ಬರೆಯುವದಂತೂ ಅವರಿಗೊಂದು ಚಟವೇ ಆಗಿ ಹೋಗಿದೆ. ಕೊನೆಮುಟ್ಟಿ ದಿನವೂ ತಮ್ಮ ಲೆಕ್ಕಗಳನ್ನು ಮುಗಿಸುವಂತೆ ಇವರು ತಮ್ಮ ದಿನದ ಕಿರ್ದಿ ಬರೆಯದೇ ಆ ದಿನವನ್ನು ಮುಗಿಸುವ ಹಾಗಿಲ್ಲ. ತಮ್ಮ ಕಾಲವನ್ನು ಸ್ವಲ್ಪವೂ ಪೋಲು ಮಾಡದೆ ಕರ್ಮನಿರತರಾಗಲು ತಾವು ಮಾಡಿದ ಪ್ರಯತ್ನಗಳು, ಜನರ ಸೇವೆಯಲ್ಲಿ ತಮಗೊದಗಿದ ಸುಖದುಃಖ, ತಮ್ಮ ಮನಸ್ಸನ್ನು ಕಾಡಿದ ಆಂದೋಳನ, ಹಿಗ್ಗಿಸಿದ ಸಮಾಧಾನ ಎಲ್ಲವನ್ನೂ ಅವರಲ್ಲಿ ಇದ್ದುದನ್ನು ಇದ್ದಂತೆ ರಮ್ಯವಾಗಿ ವರ್ಣಿಸಿಕೊಂಡಿದಾರೆ. ಮುಂದೆ ಬರಲಿರುವ ಕಾರ್ಯಕರ್ತರಿಗೆ ಉಪಯೋಗವಾಗುವ ಅನೇಕ ವಿಷಯಗಳ ಸಂಗ್ರಹವಿದೆ ಅದರಲ್ಲಿ. ಬಾಪಾರ ಜೀವನ ಉತ್ತಮ ತರದ ಗಡಿಯಾರದಂತೆ; ಹೊತ್ತಿಗೆ ಸರಿಯಾಗಿ ಗಂಟೆ ಹೊಡೆಯಲೇ ಬೇಕು. ಬಾರಿಸಿದ ಗಂಟೆಗಳ ಲೆಕ್ಕವೂ ಸರಿಯಾಗಿರಬೇಕು. ಅವರ ನಿತ್ಯ ಜೀವನದಲ್ಲಿ ಈ ರೀತಿ, ಈ ಕ್ರಮ ಗಳಿಗೆ ಗಳಿಗೆಗೆ ಕಾಣುತ್ತದೆ.

ಈ ನಿಯಮಬದ್ಧ ಜೀವನ, ಕೆಲಸದಲ್ಲಿ ಇವರಿಗಿರುವ ಆನಂದಗಳೇ ಅವರ ಎಪ್ಪತ್ತು ವರ್ಷಗಳ ಹರೆಯದ ಗುಟ್ಟು; ಅವರ ಆದರ್ಶಜೀವನದ ಅಡಿಗಲ್ಲು.

ಬಾಪಾರ ಜೀವನವು ಮೊದಲಿನಿಂದಲೂ ರಚನಾತ್ಮಕವಾದ ಹಾದಿಯಲ್ಲೇ ನಡೆದಿದೆ. ಹರಿಜನರಿಗಾಗಿ ಶಾಲೆಗಳು, ಭಂಗಿಗಳಿಗಾಗಿ ಸಹಕಾರ ಸಂಘಗಳು–ಮೇಳಾಗಳು ಅವರ ಮೊದಮೊದಲಿನ ಕಾರ್ಯಕ್ರಮ. ಗುಜರಾತಿನ ತಾಲೂಕು ತಾಲೂಕಿಗೂ ಈ ಸಂಸ್ಥೆಗಳನ್ನು ಹರಡಿದರು. ನೆರೆಯ ಹಾವಳಿ, ಬರಗಾಲಗಳ ಪಿಡುಗು ಬಂದಾಗ–ಹಿಂದುಸ್ತಾನದ ಯಾವ ಮೂಲೆಯಲ್ಲೇ ಆಗಲಿ ಬಾಪಾ ಪ್ರಥಮಸೇವಕರು. ಉರಿಯಾ, ಸಿಂಧ ಪ್ರಾಂತಗಳಲ್ಲಿ

ಅವರು ಇಂಥ ಪ್ರಸಂಗಗಳಲ್ಲಿ ಮಾಡಿದ ಸೇವೆ ಆ ಪ್ರಾಂತಗಳವರು ಮರೆಯುವಂತೆಯೇ ಇಲ್ಲ.

ಬಾಪಾರ ಕರ್ಮನಿರತತೆಯ ಬಗ್ಗೆ ಅನೇಕ ಕತೆಗಳಿವೆ. ಅವರಿಗೆ ಕೆಲಸವೇ ದೇವರು. ವಿಠ್ಠಲಭಾಯಿ ಪಟೇಲರು ಮುಂಬಯಿ ಶಾಸನ ಸಭೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಒತ್ತಾಯ ಮಾಡುವ ಶಾಸನವನ್ನು ತಂದಾಗ ಅದಕ್ಕೆ ಬೇಕಾದ ವಿಷಯ ಸಂಗ್ರಹ ಮಾಡುವದು ಬಾಪಾರ ಪಾಲಿಗೆ ಬಂತು. ಹಳ್ಳಿಹಳ್ಳಿ ತಿರುಗಿ ಅದನ್ನೆಲ್ಲ ಅಣಿಮಾಡಿದರು. ಒಂದು ರಾತ್ರಿ ಯಾವುದೋ ಒಂದು ಹಳ್ಳಿಗೆ ಹೋದರಂತೆ. ಅಲ್ಲಿನ ಶಾಲೆಯ ಮಾಸ್ತರರನ್ನು ಆ ನಡುರಾತ್ರಿಯಲ್ಲಿ ಎಬ್ಬಿಸಿ ಶಾಲೆಯ ಬಾಗಿಲು ತೆಗಿಸಿ ತನಗೆ ಬೇಕಾದ ಲೆಕ್ಕ ಅಂಕೆಗಳನ್ನೆಲ್ಲ ಬರೆದುಕೊಂಡರು. ಆ ಕೆಲಸವಾದ ಮೇಲೆ ಅಲ್ಲೇ ಚೂರು ರೊಟ್ಟಿತಿಂದು ಮತ್ತೆ ಆ ರಾತ್ರಿಯಲ್ಲೇ ಮುಂದಿನ ಊರಿಗೆ ಗಾಡಿ ಕಟ್ಟಿಸಿದರು. ಆ ಮಾಸ್ತರನಿಗೆ ಈ ನಟ್ಟಿರುಳಿನ ವ್ಯವಹಾರ, ಈ ಗಡಿಬಿಡಿ, ಊಟ ನಿದ್ದೆ ಕೂಡಾ ಬೇಡದ ಈ ಉತ್ಸಾಹ ಎಲ್ಲವೂ ತುಂಬಾ ಹೊಸದು. ಕನಸಿನಂತೆ ಎಲ್ಲಾ ಆಗಿ ಹೋಯಿತು.

ಸಂಸ್ಥಾನಗಳ ಚಳುವಳಿಗೂ ಬಾಪಾರ ಸಂಬಂಧ ಬಂತು. ಬಾಪಾ ಸ್ವತಃ ಸಂಸ್ಥಾನೀ ಪ್ರಜೆ; ಭಾವನಗರದವರು. ಅಖಿಲ ಭಾರತ ಸಂಸ್ಥಾನ ಪ್ರಜಾ ಪರಿಷತ್ತು ಮೊದಲಾದಾಗ ಬಾಪಾರ ಕೈವಾಡ ಅದರಲ್ಲಿ ತುಂಬಾ ಇತ್ತು. ಅದಕ್ಕೆ ಕೆಲವು ದಿನ ಕಾರ್ಯದರ್ಶಿಯಾಗಿದ್ದರು. ಅನೇಕ ಸಂಸ್ಥಾನಗಳ ಪರಿಷತ್ತುಗಳಿಗೆ ಮೇಲಿಂದ ಮೇಲೆ ಅಧ್ಯಕ್ಷರಾಗಿ ಸಂಸ್ಥಾನದ ಜನರಿಗೆ ಹಾದಿತೋರಿದರು. ಪಟಿಯಾಲಾ ದೊರೆಯ ದುರ್ವರ್ತನೆಗಳ ಬಗ್ಗೆ ಅ ಭಾ. ಸಂ. ಪರಿಷತ್ತು ವಿಚಾರಣಾ ಸಮಿತಿಯನ್ನು ನೇಮಿಸಿದಾಗ ಅದರಲ್ಲಿ ಅವರೂ ಒಬ್ಬ ಸದಸ್ಯರು.

೧೯೩೦ ರಲ್ಲಿ ಬಾಪಾರಂಥ ಅಜಾತಶತ್ರುವಿಗೂ ಸೆರೆ ತಪ್ಪ
ಲಿಲ್ಲ. ದೇಶಸೇವಕರನ್ನು ನೆಮ್ಮದಿಯಾಗಿ ಇರಗೊಟ್ಟರೆ ವಿಲಿಂಗ
ಡನ್ ರಾಜ್ಯಸ್ಥಿತಿಗೆ ಕಲಂಕವಲ್ಲವೆ! ಹೆಂಡದ ಅಂಗಡಿ ಪಿಕೆಟಿಂಗ್
ಮಾಡಿದರೆಂದು ಬಾಪಾರಿಗೆ ಆರು ತಿಂಗಳ ಆತಿಥ್ಯ ನೀಡಿದರು
ಸರಕಾರದವರು.

ಬಾಪಾ ತಮ್ಮ ಸಂಗಡಿಗರೊಡನೆ ಮಾತಾಡಿದಾಗ, ಅವರ
ಯೋಗಕ್ಷೇಮ ವಿಚಾರಿಸಿದಾಗ, ದುಃಖ ದುಗುಡಗಳನ್ನು ಕೇಳಿ
ತಿಳಿದುಕೊಳ್ಳುವಾಗ ತೀರ ಸಮೀಪದ ಆಪ್ತರಂತೆ, ಹಿರಿಯಣ್ಣನಂತೆ
ಆಗಿಬಿಡುತ್ತಾರೆ. ಹಿತವಚನವನ್ನು ಹೇಳುವುದರಲ್ಲಿ, ನಮ್ಮ ತಪ್ಪು
ತಡೆಗಳನ್ನು ತೋರಿಸುವುದರಲ್ಲಿ, ಹುರುಪು ಹುಮ್ಮಸ್ಸು ಕೊಡುವು
ದರಲ್ಲಿ ಅವರ ಪದ್ಧತಿ ತಂದೆಯ ವಾತ್ಸಲ್ಯವಲ್ಲ; ಅಣ್ಣನ ಪ್ರೀತಿ.
ಆ ಪ್ರೀತಿ ಎಂಥ ತುಂಬು ಹೃದಯದ್ದು ಎಂಬುದು ಅನುಭವಿಸಿ
ತಿಳಿಯಬೇಕಾದ ಮಾತು. ಹರಿಜನ ಸೇವಕ ಸಂಘದಲ್ಲಿ ಕೆಲಸಗಾರ
ನಾಗಿ ಸೇರಿದರಾಯಿತು, ಬಾಪಾ ಕುಟುಂಬಕ್ಕೆ ದತ್ತಕ ಹೋದಂತೆ.
ಅವನ ಇಡೀ ಯೋಗಕ್ಷೇಮವನ್ನೇ ಬಾಪಾ ಹೊತ್ತುಕೊಳ್ಳುತ್ತಾರೆ.
ಇಂದು ಹಿಂದುಸ್ತಾನದ ಹರಿಜನ ಸೇವಕಸಂಘದ ಕೆಲಸಗಾರರಲ್ಲಿ
ಕಂಡುಬರುವ ಸೌಹಾರ್ದಭಾವಕ್ಕೆ ಬಾಪಾ ಅಡಿಗಲ್ಲು

ಶ್ರೀ. ವೈದ್ಯನಾಥ ಅಯ್ಯರ್ ಮಧುರೆಯ ಮಹಾಜೀವ.
ತಮಿಳುನಾಡಿನಲ್ಲಿ ಆ ವರ್ಷ ದಳ್ಳುರಿಯಂತೆ ಎಲ್ಲೆಡೆಯಲ್ಲೂ ಹರ
ಡಿದ ದೇವಾಲಯ ಪ್ರವೇಶದ ಚಳುವಳಿಯ ಕೀರ್ತಿ ಅವರದು.
ಅವರು ತಮಿಳುನಾಡಿನ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿ
ರದಿದ್ದರೆ ಈ ಪವಾಡವು ಸಾಧ್ಯವಾಗುತ್ತಿರಲಿಲ್ಲ. ತಮ್ಮ ಅಧ್ಯಕ್ಷ
ಪದವಿಯನ್ನು ಬಿಡಬೇಕೆಂದು ಅವರು ಬಹಳ ಪ್ರಯತ್ನಮಾಡಿ
ದರು. ಮೂರುಸಲ ರಾಜೀನಾಮೆಯನ್ನು ಕೊಟ್ಟರು. ಅವರ ಹಟ
ಬಾಪಾರ ಅಭಿಮಾನದ ಮುಂದೆ ಸಾಗಲಿಲ್ಲ. ಪ್ರತಿಸಲವೂ ಹನಿ

ಗಣ್ಣಿನಿಂದ ಅಯ್ಯರ್ ತಮ್ಮ ಕಾಗದವನ್ನು ಹಿಂದಕ್ಕೆ ತೆಗೆದುಕೊಳ್ಳು ತ್ತಿದ್ದರು.

ಇನ್ನೊಂದು ಪ್ರಾಂತದಲ್ಲಿ ಅಧ್ಯಕ್ಷರಾಗಿದ್ದವರು ತಮಗೆ ಬಿಡು ವಿಲ್ಲವೆಂದು ಆ ಪದವಿಗೆ ರಾಜೀನಾಮೆ ಕೊಟ್ಟರು. ಬಾಪಾ ಒಪ್ಪ ಲಿಲ್ಲ. 'ಇದ್ದಷ್ಟು ಬಿಡುವೇ ಸಾಕು, ಬಿಡುವು ಅಲ್ಲ ಮುಖ್ಯ ಕೆಲ ಸಕ್ಕೆ, ಅಭಿಮಾನವಿದ್ದವರೇ ಬೇಕು.'

ಠಕ್ಕರ್ ಬಾಪಾರ ಹರಿಜನ ಸೇವೆ ಈಗಂತೂ ಹಿಂದುಸ್ತಾ ನದ ಮೂಲೆ ಮೂಲೆಗೂ ವ್ಯಾಪಿಸಿದೆ. ಅವರ ಮೂಕ ಸೇವೆಯ ಪರಿಚಯ ಎಲ್ಲರಿಗೂ ಆಗಿದೆ. ಅವರ ನಿಷ್ಕಾಮ ಸೇವೆಯ ತಪಸ್ಸಿನ ಪುಣ್ಯ ಇಡೀ ಹಿಂದುಸ್ತಾನಕ್ಕೆ ಹಂಚಲ್ಪಡುತ್ತಿದೆ. ಗಾಂಧೀಜಿಯ ಸೂತ್ರಧಾರಿತ್ವದ ಫಲ ಅದು. ಇಲ್ಲದಿದ್ದರೆ ಬಾಪಾ ತಮ್ಮ ಪಾಡಿಗೆ ತಾವು ಗುಜರಾತಿನ ಹರಿಜನರ-ಆದಿಜನರ ಸೇವೆಯಲ್ಲಿ ಮಗ್ನರಾ ಗಿರುತ್ತಿದ್ದರು. ಗುಜರಾತಿನ ಹರಿಜನರಿಗೆ ಅವರು ಒಂದು ಬಗೆಯ ಗುರುಗಳೇ ಆಗಿಬಿಟ್ಟಿದ್ದರು. ಗಾಂಧೀಜಿಯ ಮಹೋಪವಾಸದ ಫಲವಾಗಿ ಹರಿಜನ ಸೇವಕಸಂಘವು ಮೊದಲಾದಾಗ ಅದರ ಎಲ್ಲ ಹೊಣೆಯನ್ನೂ ಹೊರಲು, ಗಾಂಧೀಜೀ ಠಕ್ಕರ್ ಬಾಪಾರನ್ನು ಅವರ ಸಣ್ಣ ಲೋಕದಿಂದ ಬಯಲಿಗೆಳೆದರು. ಈಗ ಅವರ ವಿಷ ಯದಲ್ಲಿ ಅವರು ನಿಶ್ಚಿಂತರಾಗಿದ್ದಾರೆ.

ಹಿಂದುಸ್ತಾನಕ್ಕೆ ಬಾಪಾರ ಪರಿಚಯ ಅವರ ಹರಿಜನ ಕಾರ್ಯದಲ್ಲಿ ಆಗಿದ್ದರೂ ಅವರು ಮಾಡಿದ ಆದಿಜನರ ಸೇವೆಯು ಗುರುತಾಗಿಲ್ಲ. ಹರಿಜನರ ನಡುವೆ ಬಿದ್ದ ಅವರ ದೃಷ್ಟಿ ಕಾಡು ನಿವಾಸಿಗಳ ಕಡೆ ಹರಿದುದು ಸಹಜವಾಗಿದೆ. ನಮ್ಮ ದೇಶದ ಕಾಡುಜನರೆಂದರೆ ದೇವರಿಗೂ ಬೇಡಾದ ಮೂಕ ಜೀವಿಗಳು. ಹರಿ ಜನರಂತೆ ಊರು ವಸತಿಗಳಲ್ಲಿರುವ ಭಾಗ್ಯವೂ ಅವರಿಗಿಲ್ಲ. ಬೆಟ್ಟ ಗುಡ್ಡಗಳಲ್ಲಿ ಹಿಂಡುಹಿಂಡಾಗಿ ಬದುಕಿಕೊಂಡು ಉಮರಿಹೋಗು

ತ್ತಾರೆ, ಕಾಡು ಹೂಗಳಂತೆ. ಮಧ್ಯಹಿಂದುಸ್ತಾನದ ಭಿಲ್ಲರು ಈ ಪಂಗಡಕ್ಕೆ ಸೇರಿದ ಜನ. ಇತಿಹಾಸದಲ್ಲಿ ಅವರ ರಾಜರಾಣಿಯರ ಮಾತು ಬಂದಿದೆಯಾದರೂ ಈಗ ರಾಜ್ಯ ಅಡವಿಮೃಗಗಳ ಮೇಲೆಯೇ. ಇಂಥ ಜನರಲ್ಲಿ ಹೋಗಿ ತಮ್ಮ ಜೀವನದ ಸೌರಭವನ್ನು ಅವರಿಗೆ ನೀಡಿ ಅವರನ್ನು ಮನುಷ್ಯರನ್ನಾಗಿ ಮಾಡುವ ದೀಕ್ಷೆ ಹೊತ್ತಿದ್ದಾರೆ ಬಾಪಾ. ಅವರ ಭಿಲ್ಲ ಸೇವಾಮಂಡಲವು ಈಗ ಚೆನ್ನಾಗಿ ಕೆಲಸಮಾಡತೊಡಗಿದೆ. ಈಗ ಬಾಪಾ ಆಸಾಮದಲ್ಲಿನ ಕಾಡು ಜನರ ಯೋಗಕ್ಷೇಮ ವಹಿಸಿಕೊಳ್ಳಲು ದುಡಿಯುತ್ತಿದ್ದಾರೆ.

‘ಮಾಡುವದೇನು ಗುಡಿಸಲಿನ ಗೋಡೆಗಳ ನಡುವೆ ಮರ್ಯಾದೆ ಮುಚ್ಚಿಕೋ’ ಎಂಬ ಅರ್ಥದ ಗಾದೆಯೊಂದು ಕಾಠಿಯಾವಾಡದ ಜನರಲ್ಲಿ ರೂಢಿಯಿದೆ. ಆ ಗಾದೆ ದಿಕ್ಕಿಲ್ಲದ ಭಿಲ್ಲ ಜನರಿಗಾಗಿಯೇ ಹುಟ್ಟಿದುದು. ಮೊದಲೇ ಹೊಟ್ಟೆಗಿಲ್ಲದೆ ಹೇಗೋ ಕಾಲ ನೂಕುವ ಜನ. ಬರಗಾಲ ಬಂದರಂತೂ ಭಿಲ್ಲರ ಪಾಡು ಹೇಳತೀರದು. ನಾಲ್ಕು ಕಾಸು ಕಡ ಹುಟ್ಟುವದೂ ನಿಂತುಹೋಗುತ್ತದೆ. ಹಿಟ್ಟೇ ಕಾಣದವನು ಬಟ್ಟೆ ಎಲ್ಲಿಂದ ತಂದಾನು? ಚಿಕ್ಕ ಚಿಂದಿಗಳಿಂದ ಮೈಯನ್ನು ಪೂರಾ ಮುಚ್ಚಿಕೊಳ್ಳಲು ಸಾಧ್ಯವಿಲ್ಲ. ಹೀಗಾಗಿ ಭಿಲ್ಲರ ಹೆಣ್ಣುಮಕ್ಕಳು ಹೊರಗೆ ಬಾರದೆ ಒಳಗೇ ಅವಿತುಕೊಂಡು ಬಿಡುತ್ತಾರೆ. ತಮ್ಮ ಮಾನ ಕಾಯ್ದುಕೊಳ್ಳಲು ಬೇರೇನೂ ಉಪಾಯವಿಲ್ಲ ಅವರಿಗೆ.

೧೯೨೧ ರಲ್ಲಿ ಭಿಲ್ಲರ ನಾಡಾದ ಪಂಚಮಹಾಲ ಪ್ರಾಂತದಲ್ಲಿ ಸಿಡಿಲು ಬರ ಬಂತು. ಜನ ನೊಣಗಳಂತೆ ಸಾಯಹತ್ತಿದರು. ಭಿಲ್ಲರ ಗೋಳು ಬೊಂಬಾಯಿಗೆ ಮುಟ್ಟಿತು. ಅಮೃತಲಾಲ ಠಕ್ಕರರಿಗೆ ಆ ಕರೆ ತಡೆಯಲಾಗಲಿಲ್ಲ. ಪಂಚಮಹಾಲಿಗೆ ಹರಿದೋಡಿದರು. ಅಲ್ಲಿ ಭಿಲ್ಲ ಜನರ ನಡುವೆ ಸುತ್ತಾಡಿ ಅವರ ಸಂಕಟವನ್ನು ಕಣ್ಣಾರೆ ನೋಡಿದರು. ಒಂದು ಕಡೆ ಒಂದು ಭಿಲ್ಲರ

ಗುಡಿಸಲಿಗೆ ಹೋದರು. ಆ ಗುಡಿಸಲಿನ ಯಜಮಾನಿಯನ್ನು ಕರೆದರು. ಅವರ ಕಷ್ಟಸುಖವನ್ನು ತಿಳಿದುಕೊಳ್ಳುವ ಹಂಬಲ ಇವರಿಗೆ. ಆದರೆ ಆ ಹೆಣ್ಣುಮಗಳು ಹೊರಗೇ ಬರಲಿಲ್ಲ. ಆಕೆಗೆ ಹೊರಗೆ ನಿಂತವರು ತನ್ನ ಪಾಲಿನ ಆಪದ್ಬಂಧುವೆಂಬುದು ಗೊತ್ತಿಲ್ಲವೆಂದಲ್ಲ. ಠಕ್ಕರರಿಗೆ ಈ ವಿಚಿತ್ರ ವರ್ತನೆ ಅರ್ಥವಾಗಲಿಲ್ಲ. ಹತ್ತಿರ ಇದ್ದವರು ಯಾರೋ ಹೇಳಿದರು. 'ಆ ಹೆಣ್ಣುಮಗಳಿಗೆ ಉಡಲು ಒಂದು ಚಿಂದಿಯೂ ಇರಲಿಕ್ಕಿಲ್ಲ. ಹೊರಗೆ ಬಂದಾಳು ಹೇಗೆ ?' ಅಮೃತಲಾಲರಿಗೆ ತಾವಿದ್ದುದು ಭೂಮಿಯೋ ಪಾತಾಳವೋ ತಿಳಿಯದಂತಾಯಿತು. ತಮ್ಮ ಕೈ ಚೀಲದೊಳಗಿನ ಪಂಜೆಗಳೆರಡನ್ನು ಗುಡಿಸಲೊಳಕ್ಕೆ ಒಗೆದರು.

ಆ ಗಳಿಗೆಯಲ್ಲೇ ಅವರ ಪವಿತ್ರ ಜೀವನದ ಮಹಾಸಂಕಲ್ಪ ರೂಪುಗೊಂಡಿತು. ಭಿಲ್ಲ ಸೇವಾ ಮಂಡಲದ ಕೆಲಸದಲ್ಲಿ ಕೈಹಾಕಿದರು.

ನಾಲ್ಕಾರು ವರ್ಷಗಳಲ್ಲೇ ಭಿಲ್ಲರಲ್ಲಿ ಜಾಗೃತಿ ಕಂಡುಬಂತು. ಅಲ್ಲಲ್ಲಿ ಆಶ್ರಮಗಳು ಮೊದಲಾದವು. ಔಷಧಾಲಯ ಕೆಲಸ ಮಾಡತೊಡಗಿದವು. ಭಿಲ್ಲರನ್ನು ಗಾಣಮಾಡಿ ಹಿಂಡಿ ಹಿಪ್ಪೆ ಮಾಡುತ್ತಿದ್ದ ಕುಡುಕುತನ ಮರೆಯಾಗಹತ್ತಿತು. ಅವರಲ್ಲಿ ಸಭೆ ಸಮ್ಮೇಳನಗಳಾಗತೊಡಗಿದವು. ಮಾನವ ಜಾತಿಯ ಅಂಚಿಗೆ ಅವರೂ ಬಂದು ಸೇರಹತ್ತಿದರು.

ಬಾಪಾ ಈ ಅಡವಿಜನರ ಪಾಲಿನ ಭಾಗ್ಯದೇವತೆಯಾದರು. ಅವರು ಎಳೆದ ದಾರಿಯಲ್ಲಿ ಈಗ ನಡೆಯುತ್ತಿರುವ ವೆರಿಯರ್ ಇಲ್ವಿನ್ ಬಾಪಾರನ್ನು ದೇವತೆಯೆಂದು ಕರೆದುದು ಉತ್ಪ್ರೇಕ್ಷೆಯಲ್ಲ. ಕಣ್ಣಿದ್ದವರಿಗೆ ಅನುಭವವಾಗುವ ನಿಜವಾದ ಮಾತು.

ಬಾಪಾ ಅನೇಕ ಜನರಿಗೆ ಬಾಳಿನ ಹಾದಿಯನ್ನು ತೋರಿದಾರೆ. ತಮ್ಮ ಉದಾಹರಣೆಯಿಂದ, ತಮ್ಮ ಹಿತವಚನಗಳಿಂದ

ಅನೇಕರಿಗೆ ಸೇವಾದೀಕ್ಷೆ ಕೊಟ್ಟಿದಾರೆ. ಈಗ ಮುಂದಾಳುಗಳಾಗಿ ದೇಶಸೇವಕರಾಗಿರುವ ಎಷ್ಟೋ ಜನಕ್ಕೆ ಅವರು ಸ್ಫೂರ್ತಿ ಕೊಟ್ಟಿದಾರೆ. ಅವರು ಹಚ್ಚಿದ ದೀಪಗಳು ಇಂದಿಗೂ ನಿಚ್ಚಳವಾಗಿ ಬೆಳಗುತ್ತಿವೆ.

ಬಾಪಾರ ಈ ಕರ್ಮಜೀವನದ ಬಂಗಾರಕ್ಕೆ ಅವರ ಅನಾಸಕ್ತಿ ಪರಿಮಳ ಕೊಡುತ್ತಿದೆ. ಪ್ರತಿಫಲಾಪೇಕ್ಷೆಯಿಲ್ಲದ ಬರೀಗೊಡ್ಡು ನಿಷ್ಕಾಮುವೂ ಅಲ್ಲ ಅವರದು. ಅವರ ಅನಾಸಕ್ತಿ ಸಾಧಿಸಿ ಹದ ಮಾಡಿಕೊಂಡ ಒಂದು ಯೋಗವಲ್ಲ. ಸಹಜವಾಗಿಯೆ ಅರಳಿ ಕಂಪು ಬೀರುವ ಹೂವಿನಂತೆ ಅವರು.

ಅಮೃತಲಾಲ್ ಠಕ್ಕರ್ ಮೊದಲು ಬೊಂಬಾಯಿಯಲ್ಲಿ ರೋಡ್ ಇಂಜನಿಯರರಾಗಿ ಬೇಕಾದಷ್ಟು ಗಳಿಸುತ್ತಿದ್ದರು. ಅವರ ಜೀವನದ ಪ್ರಕೃತಿಗೆ ಆ ಕೆಲಸ ಒಗ್ಗಲಿಲ್ಲ. ಅದನ್ನು ಬಿಟ್ಟು ಪುಣೆಯ Servants of India ಸಂಘವನ್ನು ಸೇರಿದರು. ಅದೂ ಬಹಳ ದಿನಗಳ ಹಿಂದೆ, ಮೂವತ್ತು ವರ್ಷವಾದರೂ ಆಗಿರಬೇಕು. ಅಂದಿನಿಂದ ಅವರ ತಪಸ್ಸು ಒಂದೇ ಸಮನಾಗಿ ನಡೆದಿದೆ.

ದೇವರು ಬಾಪಾರನ್ನು ಈಗಿನ ಪರಿವ್ರಾಜಕ ಜೀವನಕ್ಕಾಗಿಯೇ ಮೊದಲಿನಿಂದಲೂ ಆರಿಸಿದಂತಿದೆ. ಬಾಪಾಗೆ ಕುಟುಂಬದ ಹೊರೆ ಬಹಳ ದಿನ ಇರಲಿಲ್ಲ. ಒಂದೇ ಒಂದು ಮಗುವನ್ನು ಹಡೆದು ಇವರ ಹೆಂಡತಿ ಕಣ್ಣು ಮುಚ್ಚಿದರು. ಆ ಮಗುವೂ ಬಹಳ ದಿನ ಉಳಿಯಲಿಲ್ಲ. ತಂದೆಯ ಬಲವಂತಕ್ಕಾಗಿ ಎರಡನೆಯ ಸಲ ಮದುವೆಯಾದರು. ಇವರ ಕೊರಲಿಗೆ ಸಾಂಸಾರಿಕ ಬಂಧನ ಹಾಕುವದು ದೇವರ ಲೆಕ್ಕದಲ್ಲಿರಲಿಲ್ಲ. ಆಕೆಯೂ ಬೇಗನೆ ತೀರಿಕೊಂಡರು. ಅಂದಿನಿಂದ ಬಾಪಾ ವಿಧುರರಾಗಿಯೇ ಇದಾರೆ. ತನ್ನವರೆಂಬುವರು ಯಾರೂ ಇಲ್ಲದೆ ಇದಾರೆ. ಅವರಿಂದ ಅವರಿಗೆ ಯಾವ ಕೊರ

ತೆಯೂ ಇಲ್ಲ. ನಾಡಿನ ದೀನದಲಿತರನ್ನೆಲ್ಲ ತನ್ನವರಾಗಿ ಮಾಡಿ ಕೊಂಡಿದ್ದಾರೆ. ಅವರದೇ ಒಂದು ಕುಟುಂಬವನ್ನು ಕಟ್ಟಿಕೊಂಡಿದ್ದಾರೆ.

ಇಂದು ಅವರಿಗೆ ೭೦ ವರ್ಷಗಳಾಗಲಿದೆ. ಈ ೩೦—೪೦ವರ್ಷ ಗಳ ಸೇವೆಯ ತರುವಾಯ ಹಿಂದುಸ್ತಾನವು ಅವರ ಜಯಂತಿ ಯನ್ನು ಮಾಡುತ್ತಿದೆ. ಬಾಪೂರನ್ನು ಗುರುತಿಸಿಕೊಳ್ಳಲು ಎಷ್ಟು ತಡಮಾಡಿತೋ ಅಷ್ಟೇ ಬೇಗನೆ ಹಿಂದುಸ್ತಾನ ಅವರನ್ನು ಮರೆ ಯಲಿಕ್ಕಿಲ್ಲವೆಂದು ನಂಬೋಣವೇ ? ಬಾಪೂರ ಜೀವನದ ಆದರ್ಶ ಗಳನ್ನು ನಮ್ಮ ಬಾಳಿನೊಳಕ್ಕೆ ಹೆಣೆದುಕೊಂಡು ಅವರನ್ನು ಅಜರ ರಿದ್ದಂತೆ ಅಮರರನ್ನೂ ಮಾಡಬಲ್ಲೆವೇನು ನಾವು ?



# ಪರಿಚಯ

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಕನ್ನಡ ಸಾಹಿತ್ಯದ ನಿಷ್ಠಾವಂತ ರಾದ ತಪಸ್ವಿಗಳೂ ಮತ್ತು ಪ್ರತಿಭಾವಂತರಾದ ಲೇಖಕರೂ ಎಂದು ನಮ್ಮ ನಾಡಿನ ಹಿರಿಕಿರಿಯರಿಗೆ ಪರಿಚಿತರಾಗಿ ಬಿಟ್ಟಿದ್ದಾರೆ. ಸದ್ಯದ ಮಟ್ಟಿಗೆ ಅವರು ತಮ್ಮ ಸಾಹಿತ್ಯಸೇವೆಯನ್ನು ರಾಷ್ಟ್ರೀಯ ಸಾಹಿತ್ಯ ಮತ್ತು ಗಾಂಧೀ ಸಾಹಿತ್ಯಕ್ಕೆ ಮರ್ಯಾದಿತ ಮಾಡಿಕೊಂಡು, ಕನ್ನಡ ಸಾಹಿತ್ಯದಲ್ಲಿಯ ಒಂದು ಕೊರತೆಯನ್ನು ದೂರಮಾಡಿದ್ದಾರಲ್ಲದೆ, ಆ ಸಾಹಿತ್ಯಕ್ಕೆ ಒಂದು ಕಳೆಯನ್ನೂ ತಂದುಕೊಟ್ಟಿದ್ದಾರೆ. ಇವರ ಸಾಹಿತ್ಯವು ಹಿರಿಕಿರಿಯರಿಬ್ಬರಿಗೂ ಮೆಚ್ಚಿಗೆಯದಾಗಿದೆ.

ಇವರು ಬರೆದ ಕೆಲ ಗ್ರಂಥಗಳೆಂದರೆ- ಪರ್ಣಕುಟಿ, ಗಾಂಧೀಸಾಹಿತ್ಯ, ಕಿಡಿಗಳು, ಗಾಂಧೀಯೋಜನೆ ಇತ್ಯಾದಿ. ಮೇಲಿನ ಪಾಠವನ್ನು "ದೀಪಮಾಲೆ'' ಯೆಂಬ ಚರಿತ್ರಸಂಗ್ರಹದಿಂದ ಆಯ್ದುಕೊಂಡದ್ದಾಗಿದೆ. ಜೀವನ ಚರಿತ್ರೆಗಳನ್ನು ಬರೆಯುವವರಲ್ಲಿ ಅವರದು ಮೇಲ್ಮೆಯಿದೆ. ಅವರು ಬರೆದ ಚರಿತ್ರೆಗಳು ಬೋಧಪ್ರದವೂ ಸ್ಫೂರ್ತಿಪ್ರದವೂ ಆಗಿವೆ

## ಅಭ್ಯಾಸ

(೧) ದೇಶ ಮತ್ತು ಸಮಾಜಸೇವಕರಲ್ಲಿ ಎರಡು ಬಗೆ ವ್ಯಕ್ತಿಗಳಿದ್ದಾರೆ. ಒಬ್ಬರು ಕಣ್ಣುಕುಕ್ಕಿಸುವ ಒಂದೆರಡು ಕೃತಿಗಳನ್ನು ಮಾಡಿ ಒಮ್ಮೆಲೆ ಪ್ರಸಿದ್ಧಿಯನ್ನು ಹೊಂದಬೇಕೆನ್ನುತ್ತಾರೆ. ಇನ್ನೊಬ್ಬರು ಪ್ರಸಿದ್ಧಿಯನ್ನು ಲೆಕ್ಕಿಸದೆ ಜೀವನವನ್ನು ಸೇವೆಗಾಗಿ ಮೀಸಲಿಡುತ್ತಾರೆ. ಈ ಎರಡು ಬಗೆಯ ವ್ಯಕ್ತಿಗಳ ನಾಲ್ಕು ನಾಲ್ಕು ಹೆಸರುಗಳನ್ನು ಹೇಳಿರಿ.

(೨) ಠಕ್ಕರ್ ಬಾಪಾ ಅವರು ಕರ್ಮಜೀವಿಗಳು ಇಲ್ಲವೆ ಕರ್ಮಯೋಗಿಗಳೆಂಬ ಮಾತನ್ನು ನೀವು ಹೇಗೆ ಸಮರ್ಥಿಸುವಿರಿ?

(೩) ಒಬ್ಬನು ರಾಷ್ಟ್ರ ಮತ್ತು ಸಮಾಜ ಸೇವೆಯ ಅನೇಕ ಕಾರ್ಯಗಳನ್ನು ಕೈಕೊಳ್ಳಬೇಕೆನ್ನುವವನಿದ್ದಾನೆ. ಇನ್ನೊಬ್ಬನು ಒಂದೇಕಾರ್ಯಕ್ಕೆ ತನ್ನ

ಸೇವೆಯನ್ನು ಮರ್ಯಾದಿಸಬೇಕೆನ್ನುವವನಿದ್ದಾನೆ. ಇವರೀರ್ವರ ಸಂವಾದ-ವೊಂದನ್ನು ೪೦ ಸಾಲುಗಳಲ್ಲಿ ರಚಿಸಿರಿ.

(೪) ಠಕ್ಕರ್ ಬಾಪಾ ಅವರು ಮಾಡಿದ ರಾಷ್ಟ್ರಸೇವೆಯ ವೈಶಿಷ್ಟ್ಯವು ಯಾವ ಬಗೆಯದು ?

(೫) ಯಾವುದಾದರೊಂದು ಅದ್ಭುತ ಕೆಲಸವನ್ನು ಮಾಡಿದ ಮಾತ್ರಕ್ಕೆ ರಾಷ್ಟ್ರಸೇವೆಯನ್ನು ಮಾಡಿದಂತಾಗುವದೆಂಬ ಬಹುಜನರ ಹುಚ್ಚು ತಿಳವಳಿಕೆಯನ್ನು ಬಾಪಾರ ಜೀವನವು ಹೇಗೆ ಹೋಗಲಾಡಿಸುತ್ತದೆ.

(೬) "ನಾನು ಮಾಡಬಯಸುವ ರಾಷ್ಟ್ರಸೇವೆ" ಎಂಬ ವಿಷಯದಮೇಲೆ ೪೦ಸಾಲುಗಳಷ್ಟು ನಿಬಂಧವನ್ನು ಬರೆಯಿರಿ

(೭) ಎಂಥ ಸಾಮಾನ್ಯ ವ್ಯಕ್ತಿಗೂ ಸಾಧ್ಯವಿದ್ದ ಸಣ್ಣಪುಟ್ಟ ರೂಪದ ಸಮಾಜ ಸೇವೆಯ ೮-೧೦ ಪ್ರಕಾರಗಳನ್ನು ಹೇಳಿರಿ.

(೮) ನಿಮಗೆ ಪರಿಚಿತರಾದ ಓರ್ವ ಸಮಾಜ ಸೇವಕರ ಚರಿತ್ರೆಯನ್ನು ಇದೇ ಶೈಲಿಯಲ್ಲಿ ಬರೆಯಲೆತ್ನಿಸಿರಿ.

(ಅ) ಟಿಪ್ಪಣಿಗಳನ್ನು ಬರೆಯಿರಿ:— ಬಾಪಾರ ಕೆಲಸಮಾಡುವ ರೀತಿ, ಅವರ ದಿನಚರಿಯ ವೈಶಿಷ್ಟ್ಯ, ಅವರು ಮಾಡಿದ ಬಿಲ್ಲರ ಸೇವೆ, ಆದಿಜನರು ಮತ್ತು ನಮ್ಮ ದೇಶದ ಕಾಡುಜನರು.

[ಆ] ಕೆಳಗಿನ ಶಬ್ದಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ. ಪಳಗಿಸು, ನಿರ್ಜರತೆ; ಹುಮ್ಮಸ್ಸು, ಕೈವಾಡ, ಮೊನೆ, ಪೋಲು, ದಳ್ಳುರಿ ಹನಿಗಣ್ಣು, ಅವಿತುಕೊಳ್ಳು. ರೂಪುಗೊಳ್ಳು.

[ಈ] ಸ್ಪಷ್ಟೀಕರಿಸಿರಿ:-[೧] ಆತ್ಮಸೂರ್ಯನ ಪ್ರತಿಬಿಂಬದಂತೆ ಹೊಳೆಯುವ ಕಣ್ಣು.[೨] ಬರಿ ಹುಚ್ಚು ದುಡಿತವಲ್ಲ ಬಾಪಾರದು[೩] ಕೆಲಸಗಳಲ್ಲಿರುವ ಆನಂದಗಳೇ ಅವರ ೭೦ ವರುಷಗಳ ಹರೆಯದ ಗುಟ್ಟು [೪] ಹರಿಜನ ಸೇವಕ ಸಂಘದಲ್ಲಿ ಕೆಲಸಗಾರನಾಗಿ ಸೇರಿದರಾಯಿತು. ಬಾಪಾ ಕುಟುಂಬಕ್ಕೆ ದತ್ತಕ ಹೋದಂತೆ.



# ನಮ್ಮೂರಿನ ಪಶ್ಚಿಮಕ್ಕೆ.



" ಲಿಂಗಾ ! "

" ಬುದ್ಧಿ "

" ತೀರ ಊರ ಹತ್ತಿರಕ್ಕೆ ಬಂದು ದಾರಿ ತಪ್ಪಿದೆವಲ್ಲ ! "

" ಇಲ್ಲೇನೊ ಬೆಳ್ಳಗೆ ಕಾಣುತ್ತೆ ಬುದ್ಧಿ-ಇದೇ ಇರಬಹುದು ದಾರಿ-ಅಲ್ಲ, ಅಲ್ಲಿ ನೀರು ಹರೀತಾ ಇದೆ-ಇದು ತೊರೆಗಡ್ಡೆ-ಅಗೋ ಅಲ್ಲೇ ತೊರೆ ತುಂಬಿ ಮೊರೀತಾ ಇದೆ."

" ಈಚೆ ದಿಣ್ಣೆ ಹತ್ತಿದರೆ ದಿಕ್ಕು ಗೊತ್ತಾಗಬಹುದು— ಹೀಗೆ ಬಾ— "

ದಿಣ್ಣೆ ಹತ್ತುವದಕ್ಕೆ ಶುರು ಮಾಡಿದೆವು. ಸಾಯಂಕಾಲವಾಗಿ ಹೋಗಿತ್ತು. ಲಿಂಗನು ಕೆಸರಿನಲ್ಲಿ ಪ್ರಯಾಸದಿಂದ ನಡೆಯುತ್ತಿದ್ದನು. ಕುದುರೆ ಲಿಂಗನ ಹಿಂದೆ, ನಾನು ಕುದುರೆಯ ಮೇಲೆ, ನಮ್ಮ ಮೇಲೆ ಕುಟುಕು ಹನಿ; ರಜಾದಲ್ಲಿ ಆ ದಿನ ಬೆಳಿಗ್ಗೆ ಬೆಂಗಳೂರಿಂದ ಹೊರಟು ಬಸ್ಸಿನಲ್ಲಿ ನಮ್ಮ ತಾಲ್ಲೂಕಿಗೆ ಹೋಗಿ ಅಲ್ಲಿ ನಮ್ಮ ಗುರುತಿನ ಶೇಕದಾರರ ಕುದುರೆಯನ್ನು ತೆಗೆದುಕೊಂಡು, ಜವಾನರ ಹುಡುಗ ಲಿಂಗನನ್ನು ಕರೆದುಕೊಂಡು ನಮ್ಮ ಹಳ್ಳಿಗೆ ಹೋಗುತ್ತಿದ್ದೆನು. ಲಿಂಗನಿಗೆ ದಾರಿ ಚೆನ್ನಾಗಿ ಗೊತ್ತಿಲ್ಲ. ನಾನು

ಆ ಕಾಡು ದಾರಿಯಲ್ಲಿ ಇಪ್ಪತ್ತೆಂಟು ಸಲ ತಿರುಗಿದವನಾದರೂ ಆ ಸಾಯಂಕಾಲ ಹೀಗಾಗಿ ಹೋಯಿತು.

"ಲಿಂಗಾ!"

"ಬುದ್ಧಿ"

"ಪೆಟ್ಟಿಗೆ ಭಾರವಾಗಿದೆಯೆ?–"

"ಭಾರವಿಲ್ಲ ಬುದ್ಧಿ, ಬಹಳ ಹಗುರವಾಗಿದೆ– ನೋಡೋಕೆ ಮಾತ್ರ ದೊಡ್ಡದಾಗಿದೆ— ಏನಿದೆ ಬುದ್ಧಿ, ಇದರಲ್ಲಿ?"

"ನಾಲ್ಕು ಪುಸ್ತಕ, ಎರಡು ಬಟ್ಟೆ, ನನ್ನ ತಮ್ಮನಿಗೆ ಒಂದು ಜರತಾರಿ ಟೋಪಿ, ಒಂದು ಜೊತೆ ಬೂಟ್ಸು–ನನ್ನ ತಂಗಿಗೆ ಎರಡು ಬೊಂಬೆ– ಇಷ್ಟೆ—"

"ನೀವು ಬೆಂಗಳೂರಿಗೆ ಹೋಗಿ ಎಷ್ಟು ದಿವಸ ಆಯಿತು ಬುದ್ಧಿ?"

"ಹೋದ ಬೇಸಿಗೆ ಆದ ಮೇಲೆ ಹೋದವನು ಮತ್ತೆ ಈಗಲೇ ಬರುತ್ತಿರುವುದು– ನೋಡು, ಆಗ್ಯೂ ಈಗ್ಯೂ ಈ ದಾರಿಯಲ್ಲಿ ಬಾಂದುಗಳು, ಕಳ್ಳಿಯ ಸಾಲು ಎಲ್ಲಾ ಬದಲಾಗಿ ಹೋಗಿದೆ— ಅದಕ್ಕೇನೇ ಈಗ ನಾವು ಯಾವದಿಕ್ಕಿನಲ್ಲಿ ಹೋಗುತ್ತಿದೆವೆಂಬುದು ಸಹ ನನಗೆ ಗೊತ್ತಿಲ್ಲ."

ನಾವು ಮೂವರೂ – ಎಂದರೆ ನಾನು, ಲಿಂಗ, ಕುದುರೆ– ಬಳಲಿದೆವು. ಅಲ್ಲಿಂದ ಸ್ವಲ್ಪ ಹೊತ್ತು ಮೌನವಾಗಿ ಪ್ರಯಾಣ ಮಾಡಿದೆವು– ನನಗಾದರೂ ಬೇಗ ಮನೆಗೆ ಹೋಗಿ ಎಲ್ಲರನ್ನೂ ನೋಡಬೇಕೆಂದು ಆಸೆ. ನನ್ನ ತಮ್ಮ, ಟೋಪಿ ಬೂಟ್ಸು ಎದುರು ನೋಡುತ್ತಿದ್ದಾನೆ. ತಂಗಿಗೆ ಗೊಂಬೆ ಬೇರೆ ಬೇರೆ ತೆಗೆದುಕೊಂಡಿದ್ದೆ. ಪರೀಕ್ಷೆ ಚನ್ನಾಗಿ ಮಾಡಿದ ವಿಚಾರ ನನ್ನ ತಂದೆಗೆ ಹೇಳಬೇಕು. ತಾಯಿಗೆ ಹೇಳಬೇಕಾದ್ದಂತೂ ಎಷ್ಟೋ ಬಿದ್ದಿತ್ತು.

ದಿಕ್ಕೆ ಹತ್ತಿ ಸುತ್ತಲೂ ನೋಡುತ್ತ ನಿಂತೆವು. ಉಪಯೋಗವಾಗಲಿಲ್ಲ. ದಾರಿ ಸಿಕ್ಕುವ ಆಸೆ ದೂರವಾಯಿತು. ಕುದುರೆಯ ಮೇಲೆ ಕುಳಿತುಕೊಂಡೇ ಒಂದು ಸಿಗರೇಟು ಹತ್ತಿಸಲು ಪ್ರಯತ್ನಿಸಿದೆ; ಬೆಂಕಿಕಡ್ಡಿ ಏನುಮಾಡಿದರೂ ಹತ್ತದು. ಗಾಳಿ, ಹನಿ. ಪ್ರಯಾಸದಿಂದ ಹಚ್ಚಿದೆ. ಕುದುರೆ ಸುತ್ತಲೂ ನೋಡುತ್ತಿತ್ತು. ಗಾಳಿ "ಸುಯ್" ಎಂದು ಬೀಸುತ್ತಿತ್ತು.

"ಲಿಂಗ!"

"ಬುದ್ಧಿ"

ಬೆಳಗಾಗುವ ವರೆಗೆ ಈ ಬಯಲಿನಲ್ಲೇ ಕೂತುಕೊಂಡಿರಬೇಕಾಗುತ್ತೆ—"

ಇದನ್ನು ಕೇಳಿ ಕುದುರೆ ಕಿವಿಯನ್ನು ನೆಟ್ಟಗೆ ಮಾಡಿಕೊಂಡಿತು.

ಲಿಂಗನು

"ಅಗೋ ಸ್ವಾಮಿ"

ನಾನು ಆಲಿಸಿದೆ. ನಮ್ಮ ಬಲಗಡೆ ಒಂದು ಕಡೆಯಿಂದ ನಾಯಿ ಬಗಳುವುದು ಕೇಳಬಂತು.

"ಈ ನಾಯಿ ಬಗಳುವ ದಿಕ್ಕಿನಲ್ಲೇ ಹೋಗೋಣ ಬುದ್ಧಿ-ಯಾವುದಾದರೂ ಹಳ್ಳಿ ಸಿಕ್ಕೀತು- ನೀವು ಮರ ಗಿಡ ಗುರುತು ನೋಡಿಕೋತಾ ಬನ್ನಿ-"

ಸ್ವಲ್ಪ ಬಲಗಡೆ ತಿರುಗಿಕೊಂಡು ದಿಕ್ಕೆ ಇಳಿಯುವದಕ್ಕೆ ಮೊದಲು ಮಾಡಿದೆವು. ಆದರೆ ಮತ್ತೆ ನಾಯಿಯ ಬಗುಳು ಕೇಳಿ ಬರಲಿಲ್ಲ. ಇದ್ದಕ್ಕಿದ್ದಹಾಗೆ ಲಿಂಗನು

"ಅದೇನು ಬುದ್ಧಿ ಅಲ್ಲಿ ಕಾಣುವುದು ?"

ಅವನು ಬೆರಳು ತೋರಿಸಿದ ಕಡೆ ನೋಡಿದೆನು.

"ಅದೊಂದು ಮರ ಕಾಣ್ತೋ- ಅಯ್ಯೋ ಪುಕ್ಕಲು ಹುಡುಗಾ- ನನ್ನ ಸಮೀಪದಲ್ಲಿ ಕುದುರೆಯ ಪಕ್ಕದಲ್ಲೇ ಬಾ-ಹೆದರಬೇಡ- ನಿನಗೊಂದು ಕಥೆ ಹೇಳುತ್ತೇನೆ-ನಿನಗೆ ಓದು ಬರಹ ಬರುತ್ತೆಯೋ ಮಗೂ ?-"

"ಬರುತ್ತೆ -ಅದೇನು ಕಥೆ ಹೇಳಿ ಬುದ್ಧಿ -"

ಅಲ್ಲಿ ಒಂದು ಸಣ್ಣ ದಿಬ್ಬದಮೇಲೆ ಕುಳಿತುಕೊಂಡೆವು. ಲಿಂಗನಿಗೆ ಕಥೆ ಹೇಳಿದೆ- ಇಂಗ್ಲೀಷರ ಸೈನ್ಯ ಕಾವೇರಿಯನ್ನು ದಾಟಿ ಬಂದದ್ದು - ಸುಲ್ತಾನನು ಕೋಟೆಯ ಬಾಗಿಲನ್ನು ಭದ್ರಪಡಿಸಿದ್ದು- ಯುದ್ಧ-ಮಧ್ಯಾಹ್ನ ಇಂಗ್ಲೀಷರು ಕೋಟೆ ಹತ್ತಿ ಬಾವುಟ ಏರಿಸಿದ್ದು-ಆಗ ಟಿಪ್ಪುವು ಊಟಮಾಡುತ್ತಿದ್ದದು-ಇಂಗ್ಲೀಷರು ಬಾವುಟ ಏರಿಸಿದ್ದುದನ್ನು ಕೇಳಿ ಎರಡು ತುತ್ತು ಊಟಮಾಡಿದ್ದವನು ಅಲ್ಲಿಗೇ ಬಿಟ್ಟು ಕುದುರೆಯಮೇಲೆ ಕೋಟೆಗೆ ಬಂದದ್ದು-ಸಾಯಂಕಾಲದವರೆಗೆ ಯುದ್ಧ ಮಾಡಿ ಬಿದ್ದದ್ದು-ಒಬ್ಬರಿಗೂ ತಿಳಿಯದಿರಲೆಂದು ಶವಗಳ ನಡುವೆ ಅಡಗಿಕೊಂಡದ್ದು- ಯಾವನೋ ಸೋಲ್ಜರನು ಅವನ ಭಂಗಾರದ ನಡುಕಟ್ಟಿಗೆ ಕೈ ಹಾಕಿದ್ದು-ಟಿಪ್ಪುವು ಕತ್ತಿ ಬೀಸಿದ್ದು-ಇಂಗ್ಲೀಷರು ಟಿಪ್ಪುವಿನ ಮಕ್ಕಳನ್ನು ಸೆರೆಹಿಡಿದದ್ದು ಟಿಪ್ಪುವಿನ ಶವವನ್ನು ಲಾಟೀನು ಬೆಳಕಿನಲ್ಲಿ ಹುಡುಕಿದ್ದು - ರಾತ್ರಿಯೆಲ್ಲಾ ಸೋಲ್ಜರುಗಳು ಶ್ರೀರಂಗ ಪಟ್ಟಣವನ್ನು ಲೂಟಿಮಾಡಿದ್ದು-ಅವರ ಹಾವಳಿಯನ್ನು ತಾಳಲಾರದೆ ಹೆಂಗಸರು ಮಕ್ಕಳೆಲ್ಲ ಬೆಳಗಿನ ವರೆಗೆ ಬೀದಿಗಳಲ್ಲಿ ನಿಂತಿದ್ದದ್ದು-ಮಾರನೆಯ ಬೆಳಿಗ್ಗೆ ಟಿಪ್ಪುವಿನ ಶವದ ಮೆರವಣಿಗೆಯಾಗಿ ಸಮಾಧಿಯಾದದ್ದು-ಎಲ್ಲದನ್ನೂ ಹೇಳಿದೆ.

"ಕಥೆ ಬಹಳ ಚೆನ್ನಾಗಿದೆ ಬುದ್ಧಿ-"

"ಇನ್ನು ಏಳು ಹೋಗೋಣ-"

ಹೊರಟೆವು. ಲಿಂಗನು ಮತ್ತೆ ಮರವನ್ನು ನೋಡುತ್ತ

“ ಮರ ಎಲ್ಲಾದರೂ ಹಾಗಿರುತ್ತೇ ಬುದ್ಧಿ ?.”

ಎಂದು ನನ್ನ ಸಮೀಪಕ್ಕೆ ಬಂದು ಕುದುರೆಯ ಬಲಪಕ್ಕದಲ್ಲಿ ನಡೆಯುತ್ತ ಮೆಲ್ಲನೆ ಕೇಳಿದನು. ಆ ಮರವು ರಾತ್ರಿಯ ಹೊತ್ತು ಅಷ್ಟು ವಿಕಾರವಾಗಿ ಕಾಣುವುದು. ಹುಡುಗ ಹೆದರಿಯಾನು ಎಂದು ನಾನು ಮತ್ತೆ ಕುದುರೆಯಿಂದ ಇಳಿದೆ.

“ಆ ಮರ ನನಗೆ ಚೆನ್ನಾಗಿ ಗೊತ್ತು ಮಗೂ- ಇಲ್ಲಿಂದ ಹತ್ತಿರವೇ ಇದೆ ನಮ್ಮೂರು-ಆ ಮರವನ್ನು ನೋಡಿ ನನ್ನ ತಮ್ಮ ಶಾಮಣ್ಣ ಹೋದವರುಷ ಹೆದರಿದ್ದ —”

“ಅವರು ಇಲ್ಲಿಗೇಕೆ ಬಂದಿದ್ದರು ಸ್ವಾಮಿ? ದಾರಿತಪ್ಪಿದ್ದರೆ?”

“ನೋಡು ಹೋದ ಬೇಸಿಗೆಯಲ್ಲಿ ನಾನು ನಮ್ಮೂರಿಗೆ ಬಂದಿದ್ದಾಗ ಒಂದು ದಿನ ಸಾಯಂಕಾಲ ನಾನು ನನ್ನ ತಮ್ಮ ಶಾಮಣ್ಣ ತಿರುಗಾಡುವುದಕ್ಕೆ ಹೊರಟೆವು. ಶಾಮಣ್ಣನಿಗೆ ಎಂಟು ವರ್ಷ ವಯಸ್ಸು. ತಾನು ಚರಿತ್ರೆಯಲ್ಲಿ ಓದಿದ್ದ ಕಥೆ-ಈಗ ನಾನು ನಿನಗೆ ಹೇಳಿದೆನಲ್ಲಾ, ಆ ಕಥೆ-ನನಗೆ ಹೇಳುತ್ತ ಬಂದ. ಶಾಮಣ್ಣ ಬಹಳ ಬುದ್ಧಿವಂತ, ಎಷ್ಟೋ ಕಥೆ ಹೇಳುತ್ತಾನೆ. ಆದರೆ ಶ್ರೀರಂಗಪಟ್ಟಣದ ಕಥೆ ಹೇಳುವಾಗ ಮೈಮರೆತು ಬಿಡುತ್ತಾನೆ. ಅವನಿಗೆ ಅಷ್ಟು ಪ್ರೀತಿ ಅದರಮೇಲೆ, ಅಷ್ಟು ಉತ್ಸಾಹ! ‘ ಶ್ರೀರಂಗಪಟ್ಟಣ ಎಂದು ತೋರಿಸುತ್ತೀಯ ?’ ಎಂದು ನನ್ನನ್ನು ಪೀಡಿಸುತ್ತಾನೆ. ಆ ಕಥೆ ಹೇಳಿಕೋತ, ನೋಡಪ್ಪ, ಆ ದಿನ ರಾತ್ರಿಯಾಯಿತು, ದಾರಿ ತಪ್ಪಿ ಬಿಟ್ಟೆವು; ಇದೇ ಮರದ ಹತ್ತಿರ ಬಂದಿದ್ದೆವು. ಶಾಮಣ್ಣ ಹೆದರಿಬಿಟ್ಟ ಈ ಮರ ನೋಡಿ. ಮನೆಗೆ ಹೋಗುತ್ತಲೂ ಜ್ವರ ಬಂತು ಅವನಿಗೆ, ಎರಡು ಮೂರು ದಿನ ವಾಸಿಯಾಗಲಿಲ್ಲ. ”

“ಹಾಗಾದರೆ ಇಲ್ಲಿಂದ ದಾರಿ ನಿಮಗೆ ಚೆನ್ನಾಗಿ ಗೊತ್ತಿರಬೇಕಲ್ಲ ಸ್ವಾಮಿ—ನಿಮ್ಮೂರು ಎಷ್ಟಾಗುತ್ತೆ ಇಲ್ಲಿಗೆ? ”

"ಇಲ್ಲಿಂದ ನಮ್ಮೂರಿಗೆ ಸರಿಯಾದ ದಾರಿ ಇಲ್ಲ. ಜೋಟಿ ಮೇಲೆ ಹೋಗಬೇಕು. ಇನ್ನೇನು ಇದೇ ನಮ್ಮೂರ ಸ್ಮಶಾನ— ಇಲ್ಲಿಂದ ಅರ್ಧಮೈಲಿಗೆ ಸ್ವಲ್ಪ ಜಾಸ್ತಿ ಆದೀತು ನಮ್ಮ ಹಳ್ಳಿ-ಅಷ್ಟೇ."

"ಏನು ಬುದ್ಧಿ ?—"

ಬಾಯಿ ಜಾರಿ ಅವನಿಗೆ ಸ್ಮಶಾನ ಎಂದು ಹೇಳಿ ಬಿಟ್ಟೆ. ಅವನು ಹದಿನಾಲ್ಕು ವರ್ಷದ ಹುಡುಗ—ಹೆದರಿಬಿಟ್ಟರೆ ?—

"ಇಲ್ಲಿಂದ ಸ್ವಲ್ಪ ಬಲಕ್ಕೆ ಹೋಗಬೇಕು ಕಾಣೋ ಅಷ್ಟೆ— ಈ ಮರ ನಮ್ಮೂರಿಗೆ ಪಶ್ಚಿಮಕ್ಕಿದೆ."

ಮಳೆ ಬಿಟ್ಟಿತ್ತು. "ಜೀ" ಎಂದು ಕತ್ತಲೆ ಕವಿಯುತ್ತಿತ್ತು. ಕಪ್ಪೆಗಳು ಎಲ್ಲೆಲ್ಲೂ ಮೊರೆಯಿಡುತ್ತಿದ್ದವು. ಲಿಂಗನು ಹಿಂದ ಹಿಂದಕ್ಕೆ ನೋಡುತ್ತ ನಡೆಯುತ್ತಿದ್ದನು. ಅವನ ಮನಸ್ಸಿನ ಗಾಬರಿ ನನಗೆ ಗೊತ್ತು. ಅವನೊಡನೆ ಮಾತಾಡುತ್ತಲೇ ಇದ್ದರೆ ಮೇಲು ಎಂದುಕೊಂಡು

"ಲಿಂಗ!"

"ಅಲ್ಲಿ ನೋಡಿ ಬುದ್ಧಿ"

ಎಂದು ಹಿಂದಕ್ಕೆ ಬೆರಳು ತೋರಿಸಿದನು.

ದೆವ್ವಗಳ ಭಯವೇನೋ ನಿನಗೆ?- ಅಯ್ಯೋ ಹುಚ್ಚಲಾ-"

"ಅಲ್ಲಿ ನೋಡಿ ಬುದ್ಧಿ-"

ಎಂದು ಒತ್ತಿ ಹೇಳಿದ. ಹಿಂದುರುಗಿ ನೋಡಿದೆ. ನಾನು ಕುಳಿತು ಕಥೆ ಹೇಳಿದ್ದ ದಿಬ್ಬದ ಬಳಿ ಒಂದು ದೀವಿಗೆ, ಎರಡು ವ್ಯಕ್ತಿಗಳು ದೀವಿಗೆಯ ಆಚೆ ಈಚೆ ಎದುರು ಬದುರಾಗಿ ಕುಳಿತು ನೆಲವನ್ನೇ ನೋಡುತ್ತಿದ್ದವು. ನನಗೆ ಉತ್ಸಾಹವು ಹೆಚ್ಚಾಯಿತು- ಆದರಲ್ಲಿ ಜಂಭ ಏಕೆ?- ಸ್ವಲ್ಪ ಭಯವೇ ಆಯಿತು.

"ಲಿಂಗ, ನಿನಗೇನು ಕಾಣಿಸುತ್ತೋ ?-"

"ನೋಡಿ ಸ್ವಾಮಿ-ದೀವಿಗೆ-ಆಚೆ-ಈಚೆ-"

"ಭಯಪಡಬೇಡ ಹತ್ತಿರ ಹೋಗಿ ನೋಡೋಣ-"

"ಸ್ವಾಮಿ ಈಚೆ ನೋಡಿ—"

ಅಲ್ಲಿ ಒಂದು ಬೆಳಕು ಚಲಿಸುತ್ತಿತ್ತು. ಒಂದು ಕೈಲಿ ಲಿಂಗನ ಕೈಯನ್ನು ಹಿಡಿದುಕೊಂಡು ಇನ್ನೊಂದರಲ್ಲಿ ಕುದುರೆಯನ್ನು ಹಿಡಿದುಕೊಂಡು ದಿಬ್ಬದ ಕಡೆ ಮೆಲ್ಲನೆ ಹೊರಟೆನು— ಅಲ್ಲಿ ನಮಗೆ ಕಾಣುತ್ತಿದ್ದುದು ಮನುಷ್ಯರಲ್ಲ.— ವ್ಯಕ್ತಿಗಳು ಧ್ವನಿಮಾಡುವಂತೆ ಬೇರೇ ಕೇಳಿತು— ಮನುಷ್ಯರಂತೆ ಮಾತು.- ಅಲ್ಲೆ ಒಂದು ಮರದಡಿಯಲ್ಲಿ ನಿಂತು ಆಲಿಸಿದೆವು.

"ಅಯ್ಯೋ—ನನ್ನ ಕಂದಯ್ಯಾ—ಹಾಲು ಬಯಸಿ ಹೋದೆಯಲ್ಲೋ—ಕುಡಿಯೊ ಮಗುವೆ— ಹಾಲು ತಂದಿದ್ದೇನೆ— ಕುಡಿಯೊ ಕಂದಾ—ದಿನ ದಿನಕ್ಕೆ ಸವೆದು ಸವೆದು ಕೊರಗಿ ಹೋದೆಯಲ್ಲೊ— ನಮ್ಮನ್ನು ಅಗಲಿ ಹೋಗುವ ದಿನ ಏನೋ ಮಾತನಾಡಲು ಹೋಗಿ ನಾಲಗೆ ಬಾರದೆ ನನ್ನ ಮುಖವನ್ನೇ ನೋಡಿದೆ—ಅಪ್ಪಯ್ಯಾ—ಏನು ಹೇಳಲಿದ್ದೆ—ನಿನ್ನ ಕಣ್ಣುಗಳಲ್ಲಿ ನಮ್ಮನ್ನು ಬಿಟ್ಟು ಹೋಗಲಾರದ ಸಂಕಟವನ್ನು ತೋರಿಸಿದೆ— ಕಂದಾ—ಕಂದಯ್ಯಾ— ಅರಣ್ಯದಲ್ಲಿ ಒಬ್ಬನೇ ಮಲಗಿದ್ದೀಯಲ್ಲೋ—"

ಎಂದು ಆಕೆ ಒಂದು ಲೋಟದಿಂದ ದಿಬ್ಬದ ಮೇಲೆ ಹಾಲು ಹೊಯ್ದು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಅಲ್ಲಿದ್ದವರು ಹೆಂಗಸರೆಂಬುದು ಮಾತ್ರ ಆ ಮಿಣುಕು ದೀಪದಿಂದ ನಮಗೆ ಗೊತ್ತಾಯಿತು ನಾನು ಲಿಂಗನ ಕಿವಿಯಲ್ಲಿ "ಯಾರೋ ಅಳುತಿದ್ದಾರೆ, ಹೆದರಬೇಡ" ಎಂದು ಹೇಳಿದೆ. ಎರಡನೆಯಾಕೆ ಚಿಕ್ಕ ವಯಸ್ಸಿನ ಹುಡುಗಿ—ಅಳುತ್ತ

ಅಣ್ಣಯ್ಯನಿಗೆ ಬರೆಯಲೂ ಆಗಲಿಲ್ಲ—ಎರಡೇ ದಿವಸದಲ್ಲಿ ಹೀಗಾಗಿ ಹೋಯಿತು, —ಅಯ್ಯೋ—"

ನಾನು ಎರಡು ಹೆಜ್ಜೆ ಮುಂದೆ ಇಟ್ಟೆನು. ಅಷ್ಟು ಹೊತ್ತಿಗೆ ನಮ್ಮ ಎಡಗಡೆ ಚಲಿಸುತ್ತಿದ್ದ ಬೆಳಕು ಬಂದು ದಿಬ್ಬವನ್ನು ಸೇರಿ

"ಏನಿದು ಹುಚ್ಚು ?—ರಾತ್ರಿಯ ಹೊತ್ತು ಹೀಗೆ ಬಂದು ಬಿಟ್ಟರೆ ಹೇಗೆ ? ಹೋದವನು ಬಂದಾನೆ ?—ಬನ್ನಿ ಮನೆಗೆ—"

ಧ್ವನಿಯನ್ನು ಗುರ್ತಿಸಿದೆ— ಆತನು ನನ್ನ ತಂದೆ.

ಕತ್ತಲೆಯೆಂದರೆ ಹೆದರುತ್ತಿದ್ದವನು ಈಗ ಒಬ್ಬನೇ ಇಲ್ಲಿ ಮಲಗಿದ್ದೀಯಲ್ಲೊ—ಆಗ ನಿನಗೆ ಇದೇ ಜಾಗದಲ್ಲಿ ಹೆದರಿಕೆ ಯಾಗಿ ಜ್ವರಬಂದಿತಲ್ಲ —ಈಗ ಇಲ್ಲಿ ಒಬ್ಬನೇ ಮಲಗಲು ಹೆದ ರಿಕೆ ಇಲ್ಲವೇ?- ಇಲ್ಲಿ ನಿನ್ನೊಬ್ಬನನ್ನೇ ಬಿಟ್ಟು ನಾನು ಮನೆಗೆ ಹೇಗೆ ಹೋಗಲಿ?-

ಅದು ನನ್ನ ತಾಯಿಯ ರೋದನ.

ಅಣ್ಣಯ್ಯ ಟೋಪಿ ಬೂಟ್ಸು ತರುತ್ತಾನೆ.—ಶ್ರೀರಂಗ ಪಟ್ಟಣದ ಕಥೆ ಯಾರು ಹೇಳುವರು? ಶ್ರೀರಂಗಪಟ್ಟಣ ಯಾರಿಗೆ ತೋರಿಸಬೇಕು?-ಎಷ್ಟು ಸಂಕಟಪಡಬೇಕು?— ಶಾಮು-"

ಅದು ನನ್ನ ತಂಗಿಯ ಅಳು.

ನನ್ನ ಆಗಿನ ಸ್ಥಿತಿಯನ್ನು ಬರೆಯಲು ಸಾಧ್ಯವಿಲ್ಲ. ಅನಂತ ವಿಶ್ವದಲ್ಲಿ ನಾನೊಬ್ಬನೇ ಇರುವಂತೆ ತೋರಿತು. ಲಿಂಗನು ನನ್ನನ್ನು ಮುಂದಕ್ಕೆ ಬಿಡದೆ ಬಲವಾಗಿ ಹಿಡಿದುಕೊಂಡಿದ್ದನು. ಅವನ ಕೈ ಬಿಡಿಸಿಕೊಂಡು ದಿಬ್ಬಕ್ಕೆ ಹೋದೆ. ನನ್ನ ತಂದೆ

"ಯಾರು ?-"

ಎಂದು ಲಾಟೀನು ಮೇಲಕ್ಕೆ ಎತ್ತಿ ಹಿಡಿದರು.

"ಏನಪ್ಪಾ—"

ಎಂದೆ. ನನ್ನನ್ನು ನೋಡಿ ಎಲ್ಲರೂ ಗೋ್ಳೋ ಎಂದು ಅತ್ತರು. ನಾನು ಶಾಮಣ್ಣನ ಸಮಾಧಿಯ ಮೇಲೆ ಒಹಳ

ಹೊತ್ತು ಕಣ್ಣೀರು ಸುರಿಸಿದೆ. ಒಬ್ಬೊಬ್ಬರೊಂದೊಂದು ಕಡೆಗೆ ಕಣ್ಣೀರಿಡುತ್ತಿದ್ದರು. ಲಿಂಗನೂ ಅಳುತ್ತಿದ್ದ-ದುಃಖದ ಉದ್ವೇಗವು ತೀರಿದ ಮೇಲೆ ನಾನು ಪೆಟ್ಟಿಗೆಯಿಂದ ಟೋಪಿ ತೆಗೆದು ಸಮಾಧಿಯ ಮೇಲಿಟ್ಟು, ಬೂಟ್ಸನ್ನು ಹತ್ತಿರದಲ್ಲಿಯೇ ಇರಿಸಿದೆನು ಶಾಮಣ್ಣ ಒಂದೊಂದು ಸಲ ಕೇಳಿದ್ದ "ಅಣ್ಣಯ್ಯ, ಈ ಗಿಡ ಮರ ಎಲ್ಲಾ ರಾತ್ರಿ ಹೊತ್ತು ಅರಣ್ಯದಲ್ಲಿ ಒಂಟಿಯಾಗಿ ಹೇಗಿರುತ್ತವೆ?" ಎಂದು. ಅದು ನನಗೆ ನೆನಪಾಗಿ ನಾನು ಆ ರಾತ್ರಿ ಅಲ್ಲೇ ಇರಬೇಕೆಂದು ಮನೆಗೆ ಹೋಗಲೊಪ್ಪಲಿಲ್ಲ. ಎಲ್ಲರೂ ಅಲ್ಲೇ ನಿಂತೆವು. ಬಹಳ ಹೊತ್ತು ಏನೇನೋ ಮಾತನಾಡಿದೆವು- ಶಾಮಣ್ಣನ ಕಾಯಿಲೆ—ಅವನು ನಮ್ಮ ಮನೆಯ ಮಾಣಿಕ್ಯ ಬಹಳ ಮುದ್ದಾದ ಹುಡುಗ-ಬುದ್ಧಿಶಾಲಿ-ಊರಿನವರಿಗೆಲ್ಲ- ಮುದ್ದು, ಅಚ್ಚು ಮೆಚ್ಚು—ಅವನನ್ನು ನೋಡಿದರೆ ಯಾರಿಗೂ ಸಂತೋಷವಾಗುವದು -ಚಟುವಟಿಕೆ ಅಷ್ಟಿಷ್ಟಲ್ಲ. ನನ್ನ ತರಿದೆ

"ನಾವೆಲ್ಲರೂ ಒಂದು ದಿನ ಇಲ್ಲಿಗೆ ಬರುವವರೇನೇ"

ಎಂದರು. ಗಾಳಿ "ಸುಯ್" ಎಂದು ಬೀಸಿತು. ನಾನು

"ಅಹುದು"

ಎಂದೆನು. ಆ ಅರಿಯದ ಮುದ್ದಿನ ಬಾಲಕನು ಎಲ್ಲಿ ಹೆದರಿದ್ದನೋ ಅಲ್ಲಿಯೇ ಶಾಶ್ವತವಾಗಿ ಮಲಗಿದ್ದನು. ನಾವು ಮನೆಗೆ ಹೋದೆವು- "ಮನೆಗೆ"



# ಪರಿಚಯ

ಈ ಕತೆಯನ್ನು ಬರೆದವರು ಕ್ಷೀರಸಾಗರರು. ಇವರ ಹೆಸರು ಬಿ. ಸೀತಾರಾಮ ಶಾಸ್ತ್ರಿ. ಬೆಂಗಳೂರ ಸೆಂಟ್ರಲ್ ಕಾಲೇಜದಲ್ಲಿ ಗಣಿತಶಾಸ್ತ್ರದ ಪ್ರಾಧ್ಯಾಪಕರಾಗಿದ್ದಾರೆ. ಇವರು ಎಷ್ಟೋ ಕತೆ, ನಾಟಕಗಳನ್ನು ಬರೆದು ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. "ನಮ್ಮೂರ ಪಶ್ಚಿಮಕ್ಕೆ " ಈ ಕತೆಯು ಇವರು ಬರೆದ ಕತೆಗಳಲ್ಲಿ ಮೇಲ್ತರಗತಿಯದು. ಈ ಕತೆಯಲ್ಲಿ ಅವರ ಪಳಗಿದ ಕೈಯನ್ನೂ ಮತ್ತು ಬೆಳೆದ ಮನಸ್ಸನ್ನೂ ಕಾಣಬಹುದು.

## ಅಭ್ಯಾಸ

[೧] ಈ ಕತೆಯ ಹೆಸರು ವಿಷಯಕ್ಕೆ ಸರಿಯಾಗಿದೆಯೆ? ಸಮರ್ಥಿಸಿರಿ. ಇಲ್ಲವಾದರೆ ಬೇರೆ ಹೆಸರನ್ನು ಸೂಚಿಸಿರಿ.

[೨] ಲಿಂಗನ ಸ್ವಭಾವವನ್ನು ನಿಮ್ಮ ಶಬ್ದಗಳಲ್ಲಿ ಬರೆಯಿರಿ.

[೩] ಈ ಕತೆಯ ಮೂಲವಸ್ತುವನ್ನು ನಾಲ್ಕಾರು ವಾಕ್ಯಗಳಲ್ಲಿ ಹೇಳಿರಿ.

[೪] ಮೂಲವಸ್ತುವು ಚಿಕ್ಕದಾದರೂ ಲೇಖಕರು ಅದನ್ನು ಹೇಗೆ ವಿಸ್ತರಿಸಿದ್ದಾರೆ ?

[೫] ಈ ಕತೆಯಲ್ಲಿ ನಿಮ್ಮ ಮನಸ್ಸನ್ನು ಹಿಡಿಯುವ ಭಾಗವು ಯಾವದು? ಅದೇಕೆ ?

[೬] (ಕತೆಗಾರಿಕೆಯು ಕನ್ನಡದಲ್ಲಿ ಶ್ರೇಷ್ಠವಾದ ಕಲೆಯಾಗಿದೆ.) ಕೆಲವು ಶ್ರೇಷ್ಠ ಕತೆಗಾರರನ್ನು ಉಲ್ಲೇಖಿಸಿರಿ.

[೭] ಶ್ರೀನಿವಾಸರ " ನಮ್ಮ ಮೇಷ್ಟ್ರು '' ಆನಂದರ - "ಭಿಕ್ಷಾಂದೇಹಿ" ಮತ್ತು ದಿ. ಗೌರಮ್ಮನವರ, ಕೌಸಲ್ಯಾನಂದನ ಕತೆಗಳನ್ನು ಓದಿರಿ.

[೮] ಕತೆಗೂ ಏಕಾಂತ ನಾಟಕಕ್ಕೂ ಒಂದು ತಂತ್ರವಿರುತ್ತದೆ. ಈ ತಂತ್ರದಲ್ಲಿ ಏಕಸೂತ್ರತೆ, ಒಂದುಗುರಿ, ತವಕ (Suspense) ವ್ಯಕ್ತಿ ಪರಿಚಯ, ಭಾವವಿಕಾಸ ಇವುಗಳು ವಿಶೇಷವಾಗಿರುವವು. ಇವೆಲ್ಲ ಮಾತುಗಳು ಈ ಕತೆಗೆ ಹೇಗೆ ಅನ್ವಯಿಸುವವೆಂಬುದನ್ನು ಹೇಳಿರಿ.

[೯] ಪುಟ ೧೬, ೩ನೇ ವಾಕ್ಯಾವಳಿಯಲ್ಲಿ ಸೂಚಿಸಿದ ಕತೆಯನ್ನು ವಿಸ್ತರಿಸಿ ಬರೆಯಿರಿ.



# ಬಳ್ಳಿಗಾವಿ.



ಬನವಾಸೆ ನಾಡು ಪ್ರಾಚೀನ ಕರ್ನಾಟಕದ ಉದ್ಯಾನವಾಗಿತ್ತು. ಬನವಸೆ ನಾಡಿನ ರಾಜಧಾನಿಯಾದ ಬಳ್ಳಿಗಾವಿಯು ಕನ್ನಡ ನಾಡದೇವಿಯ ಕುಂಕುಮ ತಿಲಕದಂತಿತ್ತು. ಬಳ್ಳಿಗಾವಿಯು ಈಗ ಮೈಸೂರು ಸಂಸ್ಥಾನದ ಶಿವಮೊಗ್ಗೆ ಜಿಲ್ಲೆಯ ಶಿಕಾರಿಪುರ ತಾಲೂಕಿನಲ್ಲಿ ಒಂದು ಹಳ್ಳಿಯಾಗಿದೆ. ಅದು ಶಾಸನಗಳಲ್ಲಿ ಬಲಿಪುರ, ಬಳ್ಳಿಪುರ, ಬಳ್ಳಿಗ್ರಾಮ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ. ಬಲಿ ರಾಕ್ಷಸನ ಸಂಬಂಧದಿಂದ ಬಲಿಪುರವೆಂಬ ಹೆಸರು ಬಂದಿದೆಯೆಂದು ಹೇಳಲಾಗುತ್ತದೆ. ಆದರೆ ಉದ್ಯಾನಗಳ ತವರೂರಾದ ಬನವಾಸೆಯ ರಾಜಧಾನಿಯಾಗಿ, ಬಳ್ಳಿಗಳಿಂದ ತುಂಬಿದ್ದರಿಂದ ಅದನ್ನು ಬಳ್ಳಿಗಳಗ್ರಾಮವೆಂದೂ ಕರೆಯಬಹುದಾಗಿದೆ. ಇದು ಪ್ರಾಚೀನ ಕನ್ನಡನಾಡಿನ ಕೈಪಿಡಿಯಂತಿದ್ದು ಕನ್ನಡರ ಸಂಸ್ಕೃತಿಯ ವೈಶಿಷ್ಟ್ಯದ ಗುರುತುಗಳಾದ ಗುಡಿ, ಕೆರೆ, ಉದ್ಯಾನಗಳಿಂದ ಈ ರಾಜಧಾನಿಯು ಸಮೃದ್ಧಿಯಾಗಿತ್ತು. ಈಗಲೂ ಕೂಡ ನಾವು ಇಲ್ಲಿ ಆ ಅವಶೇಷಗಳನ್ನು ಕಾಣುತ್ತೇವೆ. ಬನವಾಸೆ ನಾಡು ಶಾಸನಗಳಲ್ಲಿ ಬಹುವಿಧವಾಗಿ ವರ್ಣಿಸಲ್ಪಟ್ಟಿದೆ. ಅವುಗಳಲ್ಲಿ ಒಂದೆರಡು ಅವತರಣಿಕೆಗಳನ್ನು ಉದ್ಧರಿಸದೆ ಮುಂದೆ ಸಾಗಲಾರೆ.

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರ ಪೂರಯ್ಯೈಲ್ ಸನು|
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ತಜಸಿರ್ಕೆ ದಾಣಮು||
ನ್ಮದ ಯುವತೀ ಜನಂಗಳಿರೆವಟ್ಟು ಬುಧಾಳಿಯ ಜನ್ಮಭೂಮಿಯುಂ|
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿ ಮಂಡಲಂ ||
(ದಾವಣಗೆರೆ ಶಾಸನ ೩೫)

ಫಲಭರದಿಂ ಮನಂಗೊಳಿಪ ಪೂಗವನಂ ವನದೊಳ್ ಸರೋಜಲಂ|
ಜಲದ ಪೊನಲ್ಗಳಿಂ ಬೆಳೆದು ಕತ್ತಲಿಸಿರ್ಪೆಲೆವಳ್ಳಿ ಒಳ್ಳಿಗೊಂ||
ಮುಲಿವ ಪಿಕಂ ಪಿಕಧ್ವನಿಗಳಿಂ ನಲಿದಾಡುವನಂಗನಂಗನಾ|
ಕುಲಮುಮೆ ಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆ ದೇಶದೊಳ್ ||
(ಸೊರಬದ ಶಾಸನ ೨೭೮)

ಇಂತಹ ನಾಡಿನ ರಾಜಧಾನಿಯು ರಸಿಕತೆಯ, ಸಂಪತ್ತಿನ, ವೈದುಷ್ಯದ, ಸದ್ಗುಣಗಳ ತವರೂರಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ.

ಬಳ್ಳಿಗಾವೆಯು ಅತಿ ಪ್ರಾಚೀನ ರಾಜಧಾನಿಯಾಗಿದೆ. ಇಲ್ಲಿ ಪಾಂಡವರಿಂದ ಪಂಚಲಿಂಗಗಳು ಸ್ಥಾಪಿಸಲ್ಪಟ್ಟವೆಂದು ಶಿಕಾರಿಪುರದ ೧೨೫ನೆಯ ಶಾಸನದಲ್ಲಿ ಉಕ್ತವಾಗಿದೆ; ಹನ್ನೆರಡನೆಯ ಶತಮಾನದಲ್ಲಿಯಂತೂ ಈ ಪಟ್ಟಣವು ವಿಶೇಷವಾದ ಘನತೆಯನ್ನು ಪಡೆಯಿತು. ಆದರೆ ಅದಕ್ಕೆ ಮೊದಲು ಬಹುಕಾಲದಿಂದ ಸುಪ್ರಸಿದ್ಧ ರಾಜಧಾನಿಯಾಗಿರಬೇಕು. ಏಕೆಂದರೆ ಅದು ಹನ್ನೆರಡನೆಯ ಶತಮಾನದಲ್ಲಿ ಕೂಡ ಅನಾದಿ ರಾಜಧಾನಿಯೆಂದು ವರ್ಣಿಸಲ್ಪಟ್ಟಿವೆ. ಅಲ್ಲದೆ ಅದು ಪಟ್ಟಣಗಳ ತವರುಮನೆಯೆಂದೂ ಕರೆಯಲ್ಪಟ್ಟಿವೆ. ಇದು ರಾಜಧಾನಿಯಾಗಿರುವಂತೆ ಪ್ರಸಿದ್ಧ ಕ್ಷೇತ್ರವೂ ಅಹುದು. ಇದು ಪುರಿ' ಬ್ರಹ್ಮಪುರಿ ಮಠಗಳಿಂದ ತುಂಬಿಕೊಂಡು ಒಂದು ಪ್ರಸಿದ್ಧ ಧಾರ್ಮಿಕ ಕೇಂದ್ರವಾಗಿತ್ತೆಂದು ಶಿಲಾಶಾಸನಗಳಲ್ಲಿ ಉಕ್ತವಾಗಿದೆ. ಅತಿ ಪ್ರಾಚೀನವಾದ ರಾಜಧಾನಿ, ಧಾರ್ಮಿಕ ಕೇಂದ್ರ, ಕೆರೆ, ಉದ್ಯಾನಗಳ ನಿಸರ್ಗರಮಣೀಯತೆ ಇವುಗಳ

ಮೂಲಕ ಬಳ್ಳಿಗಾವಿಯು ಕನ್ನಡಿಗರ ಅಭಿಮಾನದ ಸೊತ್ತಾಗಿದೆ ಯೆಂದು ಹೇಳಬಹುದು.

ಹನ್ನೆರಡನೆಯ ಶತಮಾನವು ಕರ್ನಾಟಕದ ಚರಿತ್ರೆಯಲ್ಲಿ ಒಂದು ವಿಪ್ಲವದ ಕಾಲ. ಧಾರ್ಮಿಕ, ರಾಜಕೀಯ ಚಟುವಟಿಕೆಗಳ ಕಾಲ. ಅಂತಹ ಕಾಲಕ್ಕೆ ಬಳ್ಳಿಗಾವಿಯು ಒಂದು ಪ್ರಸಿದ್ಧ ಕೇಂದ್ರವಾಗಿತ್ತು. ಆಗ ನಡೆದ ವೀರಶೈವ ಧಾರ್ಮಿಕ ಕ್ರಾಂತಿಯಲ್ಲಿ ಮೂರು ಕೇಂದ್ರಗಳು ಜನತೆಯನ್ನು ಆಕರ್ಷಿಸಿದವು. ಕರ್ಮಯೋಗಿಯಾದ ಸಿದ್ಧರಾಮನ ಸೊನ್ನಲಿಗೆ, ಭಕ್ತಿಯೋಗಿ ಬಸವಣ್ಣನ ಕಲ್ಯಾಣ, ಜ್ಞಾನಯೋಗಿ ಪ್ರಭುದೇವರ ಬಳ್ಳಿಗಾವಿ- ಇವೇ ಆ ಮೂರು ಕೇಂದ್ರಗಳು. ವೀರಶೈವ ವಿಭೂತಿಗಳಲ್ಲಿ ಮಹಾತೇಜಸ್ವಿಯಾದ ಪ್ರಭುದೇವನು ಬಳ್ಳಿಗಾವಿಯವನೆಂದು ಹೇಳಲಾಗುತ್ತದೆ. ಈ ಮಾತಿಗೆ ಪುಷ್ಟಿ ದೊರೆಯುವಂತೆ ಈಗ ಬಳ್ಳಿಗಾವಿಯಲ್ಲಿ ಪ್ರಭುದೇವರ ಗುಡಿಯೊಂದು ತೋರಿಸಲ್ಪಡುತ್ತದೆ. ಇಲ್ಲಿಂದ ಸ್ವಲ್ಪ ಅಂತರದಲ್ಲಿ ಅನಿಮಿಷಯ್ಯನ ಕೊಪ್ಪಲು ಇದೆ. (ಈ ಅನಿಮಿಷಯ್ಯನು ಪ್ರಭುದೇವನ ಗುರುವೆಂದು ನಂಬಲಾಗುತ್ತದೆ.) ಹಾಗೂ ಸಮೀಪದಲ್ಲಿಯೇ ಗೊಗ್ಗಯ್ಯನ ಚೌಕಿ, ಏಕಾಂತದ ರಾಮಯ್ಯನ ಗುಡ್ಡ ಇವುಗಳು ಇವೆ. ಇವೆಲ್ಲವುಗಳಿಂದ ಈ ಭಾಗವು ವೀರಶೈವ ಧಾರ್ಮಿಕ ಕ್ರಾಂತಿಯ ಕಾರ್ಯಕ್ಷೇತ್ರವಾಗಿತ್ತೆಂದು ಸ್ಪಷ್ಟವಾಗಿ ತಿಳಿಯಬರುತ್ತದೆ. ಈ ನಾಡಿನಲ್ಲಿ ಆಗ ವೀರಶೈವರ ಪ್ರಭಾವವು ಹೆಚ್ಚಾಗಿತ್ತೆಂದು ತಿಳಿಯಲಿಕ್ಕೆ ಅಡ್ಡಿ ಇಲ್ಲ. ಹದಿನಾಲ್ಕನೆಯ ಶತಮಾನದಲ್ಲಿ ಒಬ್ಬ ವೀರಶೈವನು ಲಿಂಗವಂತ ಧರ್ಮಪ್ರಸಾರಕ್ಕಾಗಿ ಮಕ್ಕಾದ ವರೆಗೆ ಹೋಗಿದ್ದನೆಂದೂ ಆವನ ಹೆಸರಿನಿಂದಲೇ ಇಲ್ಲಿ ಮಲೆಯ ಮಲ್ಲೇಶ್ವರಲಿಂಗ ಸ್ಥಾಪನೆಯಾಗಿದೆಯೆಂದೂ ಒಂದು ಆಖ್ಯಾಯಿಕೆ ಇದೆ. ಈ ಮಾತನ್ನು ಮ। ರಾ। ಶ್ರೀ। ಸಿ. ಹಯವದನರಾಯರು ತಮ್ಮ ಮೈಸೂರ ಗ್ಯಾಜಿಟಿಯರದಲ್ಲಿ ಹೇಳಿದ್ದಾರೆ. ಮಹಾತೇಜಸ್ವಿ ವಿಭೂತಿಯಾದ ಪ್ರಭುದೇವನ ಸಂಬಂಧದಿಂದ ಈ ಪಟ್ಟ

ಣವು ಕೀರ್ತಿಶಾಲಿಯಾಗಿವೆ. ಅಲ್ಲದೆ ವೀರ ವಿರಕ್ತೆಯೂ ಮಹಿಳಾ ಪ್ರಪಂಚದ ಆದರ್ಶಳೂ ಆದ ಅಕ್ಕಮಹಾದೇವಿಯ ಸಂಬಂಧವೂ ಕೂಡ ಈ ಊರಿಗೆ ಇದೆ. ಈಗ ಬಳ್ಳಿಗಾವಿಯ ದೊಡ್ಡ ದಾರಿಯ ಮೇಲೆ ಕಮಲಗಂಗವ್ವನ ಗುಡಿಯೊಂದು ತೋರಿಸಲ್ಪಡುತ್ತದೆ. ಅಕ್ಕಮಹಾದೇವಿಯು ನಾಮಾಂತರವೇ ಕಮಲಗಂಗವ್ವನೆಂದು ಹೇಳುತ್ತಾರೆ. ಹಾಗೂ ಅಕ್ಕಮಹಾದೇವಿಯ ಊರೆಂದು ನಂಬಲಾದ ಉಡುತಡಿ ಗ್ರಾಮವಾದರೂ ಇಲ್ಲಿಗೆ ಸಮೀಪದಲ್ಲಿ ಇದೆ. ಹೀಗೆ ವೀರಶೈವ ಶರಣ ಶರಣೆಯರ ಸ್ಥಳಗಳು ಈ ಬಳ್ಳಿಗಾವಿಯ ನೆರೆಯಲ್ಲಿಯೇ ಇರುವದರಿಂದ ಈ ಊರಿನ ಮಹತ್ವವು ಇನ್ನೂ ಹೆಚ್ಚುತ್ತದೆ. ಬಳ್ಳಿಗಾವಿ ಹಾಗೂ ಅದರಿಂದ ಸ್ವಲ್ಪ ಅಂತರದ ಮೇಲೆ ಇರುವ ಸ್ಥಳಗಳು ಅಲ್ಲಮಪ್ರಭು, ಅಸಿಮಯ್ಯ, ಗೊಗ್ಗಯ, ಏಕಾಂತರಾಮಯ್ಯ ಹಾಗೂ ಅಕ್ಕಮಹಾದೇವಿ ಈ ಉದಾತ್ತ ಜೀವಿಗಳ ಕಾರ್ಯರಂಗಗಳಾಗಿವೆ.

ಈ ಬಳ್ಳಿಗಾವಿಯು ಚಾರಿತ್ರ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಈ ಊರು ಶಿಲಾಶಾಸನ, ಮಾಸ್ತಿಕಲ್ಲು, ವೀರಗಲ್ಲು, ನಿಸದಿಗೆಕಲ್ಲು ಇವುಗಳ ಭಾಂಡಾರವಾಗಿದ್ದು ಚರಿತ್ರ ಸಂಶೋಧಕರಿಗೆ ವಿಪುಲ ಕ್ಷೇತ್ರವನ್ನು ಒದಗಿಸಿ ಕೊಡುತ್ತದೆ. ಶಿಕಾರಿಪುರ ೯೨, ೯೬, ೯೮, ೧೦೨, ೧೦೬, ೧೦೭, ಮತ್ತು ೧೨೩ನೆಯ ಶಿಲಾಶಾಸನಗಳಲ್ಲಿಯೂ ಸೊರಬದ ೧೭೯, ೨೭೭ನೆಯ ಶಾಸನ ಮುಂತಾದವುಗಳಲ್ಲಿಯೂ ಈ ಪಟ್ಟಣದ ಘನತೆಯು ಸುಂದರವಾಗಿ ವರ್ಣಿಸಲ್ಪಟ್ಟಿದೆ. ಶಾಸನಗಳ ವರ್ಣನೆಗಳಿಂದ ಇದು ಬಹು ಮುಂದುವರಿದ ಪಟ್ಟಣವಾಗಿತ್ತೆಂದು ಕಂಡು ಬರುತ್ತದೆ. ಶಿಕಾರಿಪುರದ ೧೨೩ನೆಯ ಶಾಸನದಲ್ಲಿಯ ವರ್ಣನಾ ಭಾಗವು ಗಮನಾರ್ಹವಾಗಿರುವದರಿಂದ ಅದನ್ನು ಕೆಳಗೆ ಸಂಗ್ರಹಿಸಿದೆ.—

"ಬಲಿಪುರವು" ಬನವಾಸ ಪ್ರಾಂತದ ರಾಜಧಾನಿಯಾಗಿತ್ತು. ಪೂರ್ವದ ದಂಡನಾಯಕರು ಅಲ್ಲಿ ಸತ್ರ ವಿಹಾರೋದ್ಯಾನ, ಗುಡಿ,

ಕೆರೆ, ಕಾಲುವೆಗಳನ್ನು ನಿರ್ಮಿಸಿದ್ದರು. ಅದು ಜಗತ್ತಿನಲ್ಲಿ ಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲದೆ ಅದು ಪ್ರಾಚೀನ ಕಾಲದಿಂದ ಪ್ರಗತಿಪರವಾಗಿತ್ತು. ಪಾಂಡವರು ಇಲ್ಲಿ ಪಂಚಲಿಂಗಗಳನ್ನು ಸ್ಥಾಪಿಸಿದರು. ಈ ಪಟ್ಟಣವು ಪ್ರತಿಷ್ಠ ನಾಗರಿಕರಿಂದಲೂ ಸೆಟ್ಟಿ ಸಾಹುಕಾರರಿಂದಲೂ ತುಂಬಿತ್ತು. ಇಲ್ಲಿಯ ಹಿರಿಯಮಠ, ಪಂಚಲಿಂಗಮಠ, ತ್ರಿಪುರಾಂತಕಮಠ, ಕೋಡಿಯಮಠಗಳಲ್ಲಿ ನಿಷ್ಠಾವಂತರಾದ ಆಚಾರ್ಯರು ಇದ್ದರು. ಅವರು ರಾಜರಿಂದ ಗೌರವಿಸಲ್ಪಡುತ್ತಿದ್ದರು." ಸೊರಬದ ೨೭೭ನೆಯ ಶಾಸನದಿಂದ ಇಲ್ಲಿಯ ಪಂಚ ಮಠಗಳಿಂದ ಸ್ವಧರ್ಮ ರಕ್ಷಣೆಯು ಸರಿಯಾಗಿ ನಡೆಯುತ್ತಿತ್ತೆಂದೂ ಇಲ್ಲಿ ಮೂರು ಔಷಧಾಲಯಗಳಿದ್ದವೆಂದೂ ತಿಳಿಯುತ್ತದೆ. ಬಳ್ಳಿಗಾವಿಯಲ್ಲಿ ಆಗ ಇದ್ದ ಕೋಡಿಯ ಮಠದ ಘನತೆಯಂತೂ ಯಾರನ್ನಾದರೂ ಬೆರಗುಗೊಳಿಸದೆ ಬಿಡದು. ಕರ್ನಾಟಕದಲ್ಲಿ ಅದೊಂದು ವಿಶ್ವವಿದ್ಯಾಲಯವಾಗಿತ್ತು. ಅದು ಮಠವೆಂದು ಕರೆಯಲ್ಪಟ್ಟಿದ್ದರೂ ಕೂಡ ಮಾನವನ ಬಹುಮುಖ ಬೆಳವಣಿಗೆಗೆ ಅವಕಾಶವನ್ನೀಯುವ ಸಂಸ್ಥೆಯಾಗಿತ್ತು. ಘನ ಪಂಡಿತರೂ, ಉಜ್ವಲ ಧಾರ್ಮಿಕರೂ, ರಾಜಪೂಜಿತರೂ ಆದ ಮಠದ ಆಚಾರ್ಯರು ಅಲ್ಲಿದ್ದರೆಂದು ಅನೇಕ ಶಾಸನಗಳು ಹೇಳುತ್ತವೆ. ವೀರಶೈವ ಧರ್ಮದ ಇತಿಹಾಸದಲ್ಲಿ ಇನ್ನೂ ಒಂದು ಒಗಟವೇ ಆಗಿ ಉಳಿದಿರುವ ಕಾಳಾಮುಖರ ಒಂದು ಶಾಖೆಯವರು ಅಲ್ಲಿಯ ಮಠದಾಚಾರ್ಯರಾಗಿದ್ದರು. ಶಿಕಾರಿಪುರದ ಅನೇಕ ಶಾಸನಗಳಲ್ಲಿ ಈ ಮಠದ ಘನತೆಯು ಉಕ್ತವಾಗಿದೆ. ಅದು ಸಕಲ ವಿದ್ಯೆಗಳ ತವರುಮನೆಯಾಗಿತ್ತೆಂದು ತಿಳಿದು ಬರುತ್ತದೆ. ಅದು ನಿರ್ಗತಿಕರ ಊಟದ ಮನೆಯಾಗಿ, ರೋಗಿಗಳ ಆರೈಕೆಯ ಮನೆಯಾಗಿ, ಭಿಕ್ಷುಕರಿಗೆ ಸಹಾಯವನ್ನು ನೀಡುವ ನಿವಾಸವಾಗಿ, ವಿವಿಧ ಕಲೆಗಾರರ ಬೀಡಾಗಿ, ಧಾರ್ಮಿಕ ಕ್ರಿಯೆಗಳ ಕೇಂದ್ರವಾಗಿ ಶೋಭಿಸುತ್ತಿತ್ತೆಂದು ತಿಳಿಯುತ್ತದೆ. ಇದರಿಂದ ಹಾಗೂ ಶಾಸನ

ಗಳಲ್ಲಿ ಬರುವ ಇನ್ನುಳಿದ ವರ್ಣನೆಗಳಿಂದ ಈ ಮಠವು ಅದೆಷ್ಟು ಉಜ್ವಲವಾಗಿತ್ತೆಂಬುದನ್ನು ಊಹಿಸಬಹುದು. ಈ ಉಜ್ವಲ ಸಂಸ್ಥೆಯನ್ನೊಳಗೊಂಡ ಬಳ್ಳಿಗಾವಿಯು ಕೂಡ ಉಜ್ವಲವೇ ಸರಿ.

ಕಲಚೂರ್ಯ ಬಿಜ್ಜಳನ ಕಾಲದ ಶಾಸನಗಳಲ್ಲಿ ಈ ಊರು ಅನೇಕ ಸಲ ಉಕ್ತವಾಗಿದೆ. ದಂಡಯಾತ್ರೆಯ ಕಾಲಕ್ಕೆ ರಾಜರು ಅಲ್ಲಿ ಬೀಡು ಬಿಡುತ್ತಿದ್ದರೆಂದು ಹೇಳಿದೆ. ಅವರಂತೆ ಇಲ್ಲಿ ಬಿಜ್ಜಳ ಅರಸನು ಬೀಡು ಬಿಟ್ಟಾಗ ತನ್ನ ಅಧಿಕಾರಿಯ ಪ್ರಾರ್ಥನೆಯ ಮೇರೆಗೆ ಇಲ್ಲಿ ಧರ್ಮಕಾರ್ಯ ನಡೆಯಿಸಿದನೆಂದೂ ಕೋಡಿಯ ಮಠಕ್ಕಾಗಿ ಕೆಲವು ಊರುಗಳನ್ನು ದಾನವಾಗಿ ಕೊಟ್ಟನೆಂದೂ ಒಂದು ಶಾಸನದಲ್ಲಿ ಉಕ್ತವಾಗಿದೆ. ಶಿಕಾರಿಪುರದ ೧೨೩ನೆಯ ಶಾಸನದಲ್ಲಿ ಕೇಶವಪುರವು ಹೀಗೆ ವರ್ಣಿಸಲ್ಪಟ್ಟಿದೆ:—

ಇದು ಕೃತಕಲ್ಪ ಜನ್ಮನಿಲಯಂ ದಿಟಮಿಂತಿದು ವಿಶ್ವವೇದದ!<br>
ಭ್ಯುದಯ ನಿವಾಸಮಿಂತಿದು ಪವಿತ್ರ ಚರಿತ್ರಗುಣಾಕರಂ<br>
ಸಮಂ!<br>
ತಿದು ಘನ ಪುಣ್ಯ ಸಂಪದ ನಿಕೇತನ ಮೆಂಬಿನ ಮೊಪ್ಪಿತೋ!<br>
ರ್ಪುದು ಸಲೆ ವೀರ ಕೇಶವ ಪುರಂ ಧರಣೀ ನವರತ್ನ<br>
ನೂಪುರಂ ||

ಈ ಕೇಶವಪುರವು ಬಳ್ಳಿಗಾವಿಯ ಒಂದು ಭಾಗವೇ ಆಗಿರಬೇಕು.

ಬಳ್ಳಿಗಾವಿಯು ಶಾಸನಗಳಲ್ಲಿ ಅನಾದಿ ರಾಜಧಾನಿ, ಪಟ್ಟಣಗಳ ತವರು ಮನೆಯೆಂದು ಉಕ್ತವಾಗಿದ್ದರೂ ಕೂಡ ಅದನ್ನು ನಾವು ಗುಡಿಮಠಗಳ ಪಟ್ಟಣವೆಂದು ಯಥಾರ್ಥವಾಗಿ ಕರೆಯಬಹುದಾಗಿದೆ. ಈ ಹಳ್ಳಿಯಲ್ಲಿಯ ಜನರು ಪ್ರಾಚೀನ ಗುಡಿಗಳ ಕಲ್ಲುಗಳನ್ನೂ ಒಡೆದ ವಿಗ್ರಹಗಳನ್ನೂ ತಮ್ಮ ಮನೆಗಳಿ

ಗಾಗಿ ಉಪಯೋಗಿಸಿಕೊಂಡಿದ್ದಾರೆ. ಈಗಲೂ ಕೂಡ ಬಳ್ಳಿಗಾವಿ ಯಲ್ಲಿ —

೧. ಕೇದಾರೇಶ್ವರ ಗುಡಿ
೨. ಪಂಚಲಿಂಗನ ಗುಡಿ
೩. ತ್ರಿಪುರಾಂತಕ ಗುಡಿ
೪. ಸೋಮೇಶ್ವರ ಗುಡಿ

ಎಂಬ ಮುಖ್ಯ ನಾಲ್ಕು ಗುಡಿಗಳೂ ಅವುಗಳಿಗೆ ಹೊಂದಿಕೊಂಡಿರುವ ಇನ್ನೂ ಎಷ್ಟೋ ಸಣ್ಣ ಗುಡಿಗಳೂ ಅಲ್ಲಲ್ಲಿ ಬಿದ್ದ ವಿಗ್ರಹಗಳೂ ಇವೆ. ಈ ಪಟ್ಟಣವು ವೀರಶೈವ ಧರ್ಮ ಜಾಗೃತಿಯ ಕೇಂದ್ರವಾಗಿತ್ತೆಂದು ಹಿಂದೆ ಹೇಳಿದೆಯಷ್ಟೇ. ಆದರೆ ಇದು ಜೈನ, ಬೌದ್ಧ ಧರ್ಮಗಳಿಗೂ ಕಾರ್ಯರಂಗವಾಗಿರಬೇಕು. ಇಲ್ಲಿ ಒಂದು ದೊಡ್ಡದಾದ ಜೈನಮೂರ್ತಿಯೂ ಅಲ್ಲಲ್ಲಿ ಸಣ್ಣ ಜೈನ ವಿಗ್ರಹಗಳೂ ಕಂಡು ಬರುತ್ತವೆ. ಹಾಗು ಇಲ್ಲಿ ಒಂದು ಜೈನ ಬಸದಿ ಇತ್ತೆಂದು ತಿಳಿದು ಬರುತ್ತದೆ. ಇದರಿಂದ ಜೈನ ಧರ್ಮದವರಿಗೂ ಇದು ಆವಾಸವಾಗಿತ್ತೆಂದು ಹೇಳಬಹುದು. ಮತ್ತು ಬಳ್ಳಿಗಾವಿಯು ಬೌದ್ಧ ಧರ್ಮ ಪ್ರಸಾರದ ಕೇಂದ್ರವು ಆಗಿತ್ತೆಂದು ಊಹಿಸಲಿಕ್ಕೆ ಆಸ್ಪದವಿದೆ. ನಾಗಿಯಕ್ಕನೆಂಬ ಬೌದ್ಧ ಭಿಕ್ಷುಕಳು ಇಲ್ಲಿ ತಾರಾದೇವಿಯ ಪ್ರತಿಷ್ಠಾಪನೆ ಮಾಡಿದಳೆಂದು ಶಾಸನಗಳಲ್ಲಿ ಉಕ್ತವಾಗಿದೆ. ಈಗ ಈ ಊರಿನ ಜಡ್ಡಿ ಕೆರೆಯ ಹತ್ತರ ತಾರಾ ಭಗವತಿಯ ಮೂರ್ತಿಯು ತೋರಿಸಲ್ಪಡುತ್ತದೆ. ಇಲ್ಲಿ ಒಂದು ಬೌದ್ಧಾಲಯವೂ ಇತ್ತೆಂದು ತಿಳಿಯುತ್ತದೆ.

ಬಳ್ಳಿಗಾವಿಯು ಕನ್ನಡಿಗರ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಅನೇಕ ದೃಷ್ಟಿಯಿಂದ ಸೂಚಿಸುವಂತಿದೆ. ಇಲ್ಲಿಯ ಶೈವ, ವೈಷ್ಣವ, ಜೈನ, ಬೌದ್ಧ ದೇವಸ್ಥಾನಗಳ ಮೂಲಕ ಕನ್ನಡಿಗರ ಧಾರ್ಮಿಕ ಸಹಿಷ್ಣುತೆಯ ಪರಿಚಯವಾಗುತ್ತದೆ. ಈ ಊರಿನಲ್ಲಿ ಈಗಲೂ

ನಯನಮನೋಹರವಾಗಿ, ವಿಸ್ತಾರವಾಗಿ, ತಾವರೆಗಳಿಂದ ತುಂಬಿ ಕಂಗೊಳಿಸುವ ತಾವರಗೆರೆಯು ಕನ್ನಡಿಗರ ರಸಿಕತೆಯ ಕೈಗನ್ನಡಿಯಂತಿದೆ. ಭೈರುಂಡೇಶ್ವರ ಸ್ತಂಭದ ಬಳಿಯಲ್ಲಿಯ ಶೂಲ ಬ್ರಹ್ಮದ ಕಲ್ಲು ತತ್ವಕ್ಕಾಗಿ, ಧ್ಯೇಯಕ್ಕಾಗಿ ಜೀವವನ್ನು ತೃಣೀಕರಿಸುವ ಕನ್ನಡಿಗರ ವೈಶಿಷ್ಟ್ಯದ ಗುರುತಾಗಿದೆ. ಕೋಡಿಯ ಮಠದಿಂದ ಧ್ವನಿತವಾಗುವ ಕನ್ನಡಿಗರ ವಿಶಾಲ ಹೃದಯ, ಅಪಾರ ಕರ್ತೃತ್ವಶಕ್ತಿ, ಇವುಗಳ ನೆನಪೂ ಕೂಡ ರೋಮಾಂಚಕಾರಿಯಾಗಿದೆ. ಅಲ್ಲಿ ಇಂದು ಹಾಳು ಗೋಡೆಗಳಿಂದ ಕೂಡಿದ ಕೊಂಪೆಯನ್ನು ಕಂಡವರು ಕನ್ನಡ ನಾಡಿನ ಈಗಿನ ಹೀನ ಸ್ಥಿತಿಯ ಸ್ಮರಣದಿಂದ ಕಣ್ಣೀರು ಸುರಿಸದೆ ಇರಲಾರರು. ಭೈರವೇಶ್ವರ ಗರುಡ ಸ್ತಂಭದ ಮೊದಲಿನ ಮೂರ್ತಿ ಅಳಿದು ಹೋಗಿರಲು ಆಧುನಿಕರಾದ ಸಿದ್ಧಲಿಂಗ ಶಿಲ್ಪಿಗಳಿಂದ ರಚಿತವಾದ ಕಲಾಪೂರ್ಣ ಹೊಸ ಮೂರ್ತಿಯು ಕನ್ನಡಿಗರ ಪುನರುಜ್ಜೀವನದ ಪ್ರಭಾತಕಾಲವನ್ನು ಸೂಚಿಸುವಂತೆ ಇದೆ. ಇಲ್ಲಿಯ ಗುಡಿಗಳಲ್ಲಿಯ ಕೆತ್ತನೆಯ ಕೈವಾಡವು ಕನ್ನಡಿಗರ ಶಿಲ್ಪಕಲೆಯ ವೈಭವವನ್ನು ಸೂಚಿಸುತ್ತ ನಿಂತಿದೆ. ಬಳ್ಳಿಗಾವಿಯು ಇಂದು ಅಳಿದುಳಿದ ಊರಾದರೂ ಕೂಡ ಪ್ರಾಚೀನ ಕನ್ನಡ ನಾಡಿನ ಸಂಕ್ಷಿಪ್ತ ರೂಪದಂತಿದ್ದು ಕನ್ನಡಿಗರ ಸಂಸ್ಕೃತಿಯ ಕೈಗನ್ನಡಿಯಾಗಿ ಇಂದಿಗೂ ಉಳಿದು ನಿಂತಿದೆ ಯೆಂದು ಕಂಡುಬರುವಂತಿದೆ.



# ಪರಿಚಯ

ಶ್ರೀ ಸ. ಸ. ಮಾಳವಾಡರು ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಕನ್ನಡ ಪ್ರಾಧ್ಯಾಪಕರು. ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕವಿಶ್ವವಿದ್ಯಾಲಯ ಸಮಿತಿ ಮೊದಲಾದವುಗಳಲ್ಲಿ ಆಸ್ಥೆಯಿಂದ ಕೆಲಸ ಮಾಡುವವರು. ೧೯೪೫ ಡಿಸೆಂಬರದಲ್ಲಿ ಮದ್ರಾಸದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾದ ಸಾಹಿತ್ಯಗೋಷ್ಠಿಗೆ ಅಧ್ಯಕ್ಷರಾದವರು. ಇವರ ಕಾರ್ಯಕ್ಷೇತ್ರ ವಿಶಾಲವಾದುದು. ಸಾಹಿತ್ಯ ಸೇವೆ ನಾನಾಮುಖವಾದರೂ ಸಾಹಿತ್ಯ ವಿಮರ್ಶೆ ಸಾಹಿತ್ಯ ಸಂಕಲನೆಗಳಲ್ಲಿ ವೈಶಿಷ್ಟ್ಯವನ್ನು ಪಡೆದುದು. ಇವರ "ಸಾಹಿತ್ಯ ಸಂಸ್ಕೃತಿ ದರ್ಶನ," ಮತ್ತು "ಗದ್ಯಮಾಲೆಗಳೇ ಅದಕ್ಕೆ ಸಾಕ್ಷಿ. ಇವರು ಸಂಶೋಧನದಲ್ಲಿಯೂ ಶ್ರಮವಹಿಸುತ್ತಿದ್ದಾರೆ. ಇಲ್ಲಿ ಆಯ್ದುಕೊಂಡಿರುವ ,ಬಳ್ಳಿಗಾವಿ, ಎಂಬ ಬರಹದಲ್ಲಿ ಈ ಮಾತನ್ನು ಕಾಣಬಹುದು ಅವರಿಂದ ಇನ್ನೂ ಹೆಚ್ಚಾದ ಸೇವೆ ನಡೆದು ಕನ್ನಡಿಗರಿಗೆ ಅವರ ಆಳವಾದ ಅಭ್ಯಾಸದ ಫಲವು ದೊರೆಯಬಹುದೆಂದು ಅಪೇಕ್ಷಿಸಬಹುದು.

## ಅಭ್ಯಾಸ

(೧) ಲೇಖಕರು ಸ್ವಲ್ಪದರಲ್ಲಿ ಹೇಳಿದ ಬನವಾಸಿಯ ವರ್ಣನೆಯನ್ನು ಪಂಪನು ಮಾಡಿದ ವರ್ಣನೆಯ ಜೊತೆಗೆ ಹೋಲಿಸಿ ನೋಡಿರಿ.

(೨) ಲೇಖಕರು ಬಳ್ಳಿಗಾವಿಯ ವ್ಯುತ್ಪತ್ತಿಯನ್ನು ಯಾವಯಾವ ರೀತಿಯಲ್ಲಿ ಸೂಚಿಸಿದ್ದಾರೆ ? ಇದೇ ರೀತಿಯ ವ್ಯುತ್ಪತ್ತಿಯನ್ನು ಹೇಳಬಹುದಾದ ಕೆಲವು ಗ್ರಾಮಗಳ ಹೆಸರುಗಳನ್ನು ಹೇಳಿರಿ. (ಸೂ:—ಮಾಸ್ತಿಯವರ "ಕೋಗಿಲೆ" ಪದ್ಯವನ್ನು ಓದಿರಿ)

(೩) ಪೌರಾಣಿಕ ಸಂದರ್ಭ ಇಲ್ಲವೆ ಸಂಬಂಧಗಳನ್ನೊಳಗೊಂಡ ಮೂರು ನಾಲ್ಕು ಗ್ರಾಮಗಳ ಹೆಸರುಗಳನ್ನು ಹೇಳಿರಿ.

(೪) ಕಾಲಾಂತರದಿಂದ ನಗರಗಳು ಹಳ್ಳಿಗಳಾಗುತ್ತವೆ ಮತ್ತು ಹಳ್ಳಿಗಳು ನಗರಗಳಾಗುತ್ತವೆ. ಎಂಬ ಮಾತನ್ನು ಸಮರ್ಥಿಸಲು ೪-೫ ಉದಾಹರಣೆಗಳನ್ನು ಕೊಡಿರಿ.

(೫) "ಹನ್ನೆರಡನೆಯ ಶತಮಾನವು ಕರ್ನಾಟಕದ ಚರಿತ್ರೆಯಲ್ಲಿ ಧಾರ್ಮಿಕ ರಾಜಕೀಯ ಚಟುವಟಿಕೆಗಳ ಕಾಲ" ಈ ವಿಧಾನವನ್ನು ಸೋದಾಹರಣವಾಗಿ ಸಮರ್ಥಿಸಿರಿ.

(೬) ಅಕ್ಕಮಹಾದೇವಿ, ಪ್ರಭುದೇವರು, ಅಲ್ಲಮಪ್ರಭು, ಸಿದ್ಧರಾಮ ಇವರು ಯಾರು? ೮-೧೦ ವಾಕ್ಯಗಳಲ್ಲಿ ಅವರ ಪರಿಚಯವನ್ನು ಕೊಡಿರಿ.

(೭) ಶಾಸನಗಳಿಂದ ನಮ್ಮ ಸಾಮಾಜಿಕ ಸಾಂಸ್ಕೃತಿಕ ಪರಿಚಯವು ಬಹಳ ಚನ್ನಾಗಿ ಆಗುತ್ತದೆ. ಇದಕ್ಕೆ ಶಾಸನಗಳಲ್ಲಿಯ ಯಾವಯಾವ ಅಂಶಗಳು ಕಾರಣವಾಗಿವೆ ?

[೮] ಮಠಗಳು, ಶಿಲಾಶಾಸನಗಳು, ಮಾಸ್ತಿಕಲ್ಲುಗಳು, ಇತ್ಯಾದಿ ನಮ್ಮ ನಾಡಿನ ಪ್ರಾಚೀನ ಸಂಸ್ಕೃತಿಯ ಹೆಗ್ಗುರುತುಗಳು. ಅವು ಈಗ ಅಳಿದು ಹೋದುದರಿಂದಲೆ ನಮ್ಮ ನಾಡು ಅವನತಿಯನ್ನು ಹೊಂದಿರಬಹುದಲ್ಲವೆ ?

[೯] ಬಳ್ಳೀಗಾವಿಯು ಐತಿಹಾಸಿಕ ಮಹತ್ವದ ಸ್ಥಳವಾಗಿದ್ದರೂ ಇಂದು ಅದರ ಮಹತ್ವವು ನಮಗೆ ಸಾಮಾನ್ಯವಾಗಿ ತಿಳಿಯದಂತಾಗಿದೆ. ಕರ್ನಾಟಕದಲ್ಲಿ ಇಂಥ ಹಳ್ಳಿಗಳಾಗಿದ್ದ ಎಷ್ಟೋ ಸ್ಥಳಗಳು ತಮ್ಮ ತಮ್ಮ ದೊಡ್ಡ ಇತಿಹಾಸವನ್ನು ಹೇಳಬಲ್ಲವು. ಈ ರೀತಿಯ ಇತಿಹಾಸವು ಕೆಳಗಿನ ಸ್ಥಳಗಳಿಗೆ ಹೇಗಿದೆ ಎಂಬದನ್ನು ಶೋಧಿಸಿರಿ.

ಬದಾಮಿ, ಕೊಪ್ಪಳ, ಹಾನಗಲ್ಲು, ಲಕ್ಕುಂಡಿ, ಶ್ರೀರಂಗ.

ಸ್ಪಷ್ಟೀಕರಿಸಿರಿಃ—ಬನವಾಸಿ ನಾಡಿನ ರಾಜಧಾನಿಯಾದ ಬಳ್ಳಿಗಾವಿಯು ಕನ್ನಡ ನಾಡದೇವಿಯ ಕುಂಕುಮ ತಿಲಕದಂತಿತ್ತು.

(ಅ) "ಅದು ನಿರ್ಗತಿಕರ ಊಟದ ಮನೆಯಾಗಿ............ಇಂಥ ಪದ ಲಾಲಿತ್ಯವನ್ನು ನೀವು ಅನುಕರಿಸಬಲ್ಲಿರಾ ? ಇಂಥ ಒಂದೆರಡು ವಾಕ್ಯಗಳನ್ನು ಬರೆಯಲೆತ್ನಿಸಿರಿ.

(ಆ) ಕೆಳಗಿನ ಶಬ್ದಗಳನ್ನು ಬೇರೆ ಬೇರೆ ವಾಕ್ಯಗಳಲ್ಲಿ ಉಪಯೋಗಿಸಿರಿ. ಕೈಪಿಡಿ, ಸೊತ್ತು, ಕಾರ್ಯಕ್ಷೇತ್ರ, ಮುಂದುವರಿ, ತವರುಮನೆ, ಕೈವಾಡ-

(ಇ) "ಮಂಡಲ" ಎಂಬ ಶಬ್ದದ ಮೂರು ಬೇರೆ ಬೇರೆ ಅರ್ಥಗಳನ್ನೂ, 'ಮನೆ' ಎಂಬುದಕ್ಕೆ ಸಮಾನವಾದ ಅರ್ಥದ ಐದು ಶಬ್ದಗಳನ್ನೂ ಹೇಳಿರಿ.

# ಜಾಣತನದ ಪ್ರದರ್ಶನ.



ಈಗ ನೋಡಿದಲ್ಲೆಲ್ಲ ಪ್ರದರ್ಶನಗಳ ಹುಚ್ಚು; ಹಾಗೆಂದರೆ ಯಾರಾದರೂ ನಿದ್ದೆಗಣ್ಣಲ್ಲಿ ಓದುವಾಗ 'ಹುಚ್ಚಿನ ಪ್ರದರ್ಶನ, ಎಂದು ಓದಬಹುದು, ಆದರೆ ಓದುಗರ ನಿದ್ದೆಗೆ ಸಂಪಾದಕರು—ಅಲ್ಲಲ್ಲ—ನಾವು ಜವಾಬ್ದಾರರಲ್ಲ ಎಂದು ಮೊದಲೇ ಹೇಳಿಡುವೆವು. ಸಮ್ಮೇಳನಗಳಲ್ಲಿ, ನಾಡ ಹಬ್ಬಗಳಲ್ಲಿ, ಹುಣ್ಣಿವೆ-ಹಬ್ಬಗಳಲ್ಲಿ, ಸಂಕ್ರಾಂತಿ — ಸಮಾರಾಧನೆಗಳಲ್ಲಿ ಪ್ರದರ್ಶನವನ್ನು ಏರ್ಪಡಿಸದಿದ್ದರೆ, ಕಾರ್ಯಕ್ರಮವೆ ಪೂರ್ತಿಯಾದಂತೆನಿಸುವುದಿಲ್ಲ. 'ಪ್ರದರ್ಶನ' ಎಂದರೇನು ? ತೋರಿಸುವುದು. ಕೆಲಸ ಮಾಡುವುದನ್ನು ತೋರಿಸುವದೋ ? ಮಾಡುವ ಕೆಲಸವನ್ನು ತೋರಿಸು—ಛೆ, ಲೇಖಕರೆ ನಿದ್ದೆ ಹೋದಂತಿರುವ ಈ ಶಬ್ದಾಡಂಬರವನ್ನು ಬಿಟ್ಟುಬಿಡೋಣ. ಅಜ್ಞರಿಗಾಗಿ, ಸಾಮಾನ್ಯ ಮನುಷ್ಯರಿಗಾಗಿ ಕೆಲವು ಮಹತ್ವದ ಸಂಗತಿಗಳ, ಆವಶ್ಯಕ ವಿಷಯಗಳ ಮಾದರಿಗಳನ್ನು ಮುಂದಿಟ್ಟು ಜ್ಞಾನವನ್ನು ಕೊಡುವುದೆ ಪ್ರದರ್ಶನದ ಉದ್ದೇಶವಲ್ಲವೆ ? ಉದಾಹರಣೆಗಾಗಿ ಥರ್ಡಕ್ಲಾಸ್ ಪ್ರವಾಸದ ಪ್ರದರ್ಶನ - ? ? ?

ನಗಬೇಡಿರಿ, ದಯವಿಟ್ಟು. ಥರ್ಡಕ್ಲಾಸ ಪ್ರವಾಸವೆಂದರೆ ನಮ್ಮ ದೇಶದಲ್ಲಿ ಎಂತಹ ಮಹತ್ವದ ಸಂಗತಿಯಾಗಿದೆ, ಎಂತಹ

ಆವಶ್ಯಕ ವಿಷಯವಾಗಿದೆ? ಭಾರತದಲ್ಲಿ, ಕಲಿಯುಗದ ಭರತ ವರ್ಷದಲ್ಲಿ ಜನ್ಮ ತಾಳಿದ ಮಾನವನಿಗೆ ಥರ್ಡಕ್ಲಾಸ ಪ್ರವಾಸವು ಬಿಟ್ಟಿದ್ದಲ್ಲ. ಅದಕ್ಕಾಗಿಯೆ ಇಂದು ಪರಮಾತ್ಮನು ನಮ್ಮ ದೇಶದಲ್ಲಿ ಅವತಾರ ತಾಳಲು ಹಿಂದು ಮುಂದು ನೋಡುತ್ತಿದ್ದಾನೆ. ಇರಲಿ, ಇಷ್ಟೊಂದು ಮಹತ್ವದ ಮತ್ತು ಅವಶ್ಯಕವಾದ ಈ ಥ. ಕ್ಲಾ. ಪ್ರವಾಸವು ಸುಲಭವಾದುದಲ್ಲ, ಅಭ್ಯಾಸಮಾಡದೆ ಬರುವಂತಹುದಲ್ಲ, ತಪಶ್ಚರ್ಯೆಯದೆ ಸಾಧಿಸುವಂತಹುದಲ್ಲ. ಥ. ಕ್ಲಾ. ಪ್ರವಾಸಿಗನು ಟಿಕೆಟ್ಟನ್ನು ಕೊಂಡು ಕೊಳ್ಳುವುದು ಹೇಗೆ ಮತ್ತು ಎಲ್ಲಿ? ಮೊದಲನೆಯ ಎರಡನೆಯ ಕ್ಲಾಸಿನವರಿಗೆ 'ಸುಸ್ವಾಗತಂ' ಇಲ್ಲಿ ಟಿಕೆಟ್ಟನ್ನು ಕೊಳ್ಳುವ ಅನುಗ್ರಹ ಮಾಡುವಿರಾ?' ಎಂದು ಬರೆದು ತೋರಿಸಿರುತ್ತಾರೆ. ಜನರ ಗಲಾಟೆ ಇದ್ದಲ್ಲಿ ಥ. ಕ್ಲಾ. ಟಿಕೆಟ್ಟು ದೊರಕುವುದೆಂಬುದು ಸಾಮಾನ್ಯ ನಿಯಮ. ಅದರಂತೆ ನಾನೂ ಒಮ್ಮೆ ಆಚರಿಸಿದ್ದೆ, ಜನರ ಗಲಾಟೆಯಲ್ಲಿ ಘುಮುಕಿದೆ; ಟ್ರೇನು ಬಂದಿತು, ನುಗ್ಗಿದೆ; ಟ್ರೇನು ಹೊರಟಿತು, ಹೌ ಹಾರಿ ನಿಂತೆ! ಟಿಕೆಟ್ಟು ದೊರೆಯಲಿಲ್ಲ! ಇಷ್ಟರಲ್ಲಿ ಜನಸಂದಣಿಯು ಸಡಿಲಾಯಿತು. ನೋಡಿದರೆ ಅಲ್ಲಿ ಟಿಕೆಟ್ಟು ಕೊಡುವ ಸ್ಥಳವಿದ್ದಿರಲಿಲ್ಲ. ಚಹಾ, ಚಪ್ರದಾಧಿಪತಿ ಮಾರವಾಡಿಯ ಅಂಗಡಿ! ಈ ಅನುಭವವಾಗಲಿ, ಯಾವನೋ ಒಬ್ಬನು ಉಡುಪಿಗೆ ಹೋದಾಗ ಕನಕನ ಕಿಂಡಿಯನ್ನು ನೋಡಿ 'ಒಂದು ಹುಬ್ಬಳ್ಳಿ ಟಿಕೆಟ್ಟು' ಎಂದು ಅಭ್ಯಾಸವಶದಿಂದ ಹಣವನ್ನು ಒಗೆದ ಅನುಭವವಾಗಲಿ ಈ ಕೆಲಸ ಸುಲಭವಲ್ಲವೆಂಬುದನ್ನು ತೋರಿಸಿ ಕೊಡುತ್ತಿವೆ. ಇನ್ನು ಟಿಕೆಟ್ಟನ್ನು ಹೇಗಾದರೂ ಸಂಪಾದಿಸಿ ಸ್ಟೇಶನಿನ ಒಳಗೆ ನುಗ್ಗಿ ಟ್ರೇನು ಬಂದು ನಿಂತಾಗ ಸ್ಥಳವನ್ನು ಹುಡುಕುವುದೆಂದರೆ ಅದೇನು ಸಾಮಾನ್ಯ ಕೆಲಸವೆ? ಹೆಂಗಸರ ಗಾಡಿಯೊಂದನ್ನು ಬಿಟ್ಟರೆ ಮತ್ತೆಲ್ಲೂ ಸ್ಥಳವೇ ಇಲ್ಲ.—ಇಲ್ಲ ಎಂದರೆ ನಿಜವಾಗಿಯೆ ಇಲ್ಲ ಎಂದಲ್ಲ. ಸ್ಟೇಶನ

ಮಾಸ್ಟರರಾಗಲಿ, ಗಾರ್ಡನಾಗಲಿ 'ಬೇಕಾದಷ್ಟು ಸ್ಥಳವಿದೆ' ಎಂದು ಹೇಳುವರು. ಇದೆ ಸ್ಥಳ, ಆದರೆ ಅದನ್ನು ಗಳಿಸುವ ಯೋಗ್ಯತೆಬೇಕು. ಯುಕ್ತಿಬೇಕು. ಕೆಲವು ಗಾಡಿಗಳ ಬಾಗಿಲು ಹೊರಗೆ ತೆರೆಯುವುದು, ನೋಡಿರುವಿರಾ? ಅಂತಹ ಗಾಡಿಯನು ಹುಡುಕಬೇಕು. ನನಗೆ ಒಮ್ಮೆ ಆ ಯುಕ್ತಿ ಸಾಧಿಸಿದೆ, ಯಾವಾಗಲೂ ಅದನ್ನೇ ನಡೆಸುವೆ. ಒಳಗಿನಿಂದ ಜನರು ಇಲ್ಲ, ಇಲ್ಲ, ಎಂದು ಕೂಗುವಾಗಲೆ ನಾನು ಹೊರಗೆ ತೆರೆಯುವ ಬಾಗಿಲನ್ನು ಎಳೆದೆ. ತಟ್ಟನೆ ಒಳಗಿನಿಂದೊಂದು ವ್ಯಕ್ತಿ ಉರುಳಿ ಬಿದ್ದಿತು.... ಬಾಗಿಲಿಗೆ ಆತುಕೊಂಡು ಕುಳಿತ ವ್ಯಕ್ತಿ! ಸುತ್ತಲೆಲ್ಲ ಹಾಹಾಕಾರವೆದ್ದಿತು. ಸ್ಟೇಶನ ಮಾಸ್ಟರರು ಬಂದರು. 'ಏನು, ಯಾರದು ಬಿದ್ದವರು?' ಎಂದು ಗದ್ದರಿಸಿದರು. 'ನಾನು' ಎನ್ನುತ್ತ ನಾನೇ ಮುಂದೆ ಬಂದೆ. ಘಾಂ ಘೀಂ ಅಂತ ಸಂಧ್ಯಾವಂದನೆಯ ಮಂತ್ರದ ಹಾಗೆ ಏನೋ ಇಂಗ್ಲಿಶದಲ್ಲಿ ಬೈದರು 'ನಡೆ' ನಿನ್ನ ಸಲುವಾಗಿ ಟ್ರೇನು ಲೇಟ ಆದೀತು' ಎಂದು ಅಧಿಕಾರ ದರ್ಪದಿಂದ ನನ್ನನ್ನು ಒಳಗೆ ತಳ್ಳಿ ಬಾಗಿಲನ್ನು ಭದ್ರವಾಗಿ ಮುಚ್ಚಿ ಬಿಟ್ಟರು! ಅಂದಿನಿಂದ ನನಗೆ ಸ್ಥಳ ದೊರೆಯುತ್ತಿದೆ. ಆದರೆ ಎಲ್ಲರಿಗೂ ಆ ಕಲೆ ಸಾಧಿಸಬೇಕಲ್ಲ? ಇದಲ್ಲದೆ ಇನ್ನೂ ಒಂದು ಲಕ್ಷ್ಯವಲ್ಲಿಡತಕ್ಕ ಮಾತಿದೆ. ನಿಮ್ಮ ಸ್ಟೇಶನು ಬಂದಾಗ ಇಳಿಯುವುದೂ ಬಲು ಕಷ್ಟ. ಅದಕಾಗಿಯೂ ಹೊರಗೆ ತೆರೆಯುವ ಬಾಗಿಲದ ಗಾಡಿಯನ್ನೆ ಹುಡುಕಬೇಕಾಗುವುದು. ಇರಲಿ, ಇಷ್ಟೆಲ್ಲ ಸಾಮಾನ್ಯ ಮನುಷ್ಯನಿಗೆ ತಿಳಿಯುವುದು ಹೇಗೆ? ಅದಕಾಗಿ ಸರಕಾರದವರಾಗಲಿ, ಸಾಮಾಜಿಕ ಸಂಘದವರಾಗಲಿ, ಪ್ರದರ್ಶನಗಳನ್ನೇರ್ಪಡಿಸಬೇಕು; ಅಲ್ಲಿ ಸಾಕ್ಷಾತ್ ಪ್ರಯೋಗ (Experiment) ವನ್ನು ಮಾಡಿ ಥ. ಕ್ಲಾ. ಸಂಚಾರದ ಕಲೆಯನ್ನೂ ಪಾಠವನ್ನೂ ಕಲಿಸಬೇಕು, ತೋರಿಸಬೇಕು.

ಒಂದು ಉದಾಹರಣೆಯನ್ನೆ ತೆಗೆದುಕೊಳ್ಳೋಣ; ಇಂತಹ ಪ್ರದರ್ಶನಕ್ಕೆ ವೆಚ್ಚ ಕೂಡ ಬಹಳ ಬೇಕಾಗುವುದಿಲ್ಲ ಎಂಬುದು

ಆ ಮೇಲೆ ನಿಮಗೆ ಕಂಡುಬರುವುದು. ಹಳೆಯ ರಾಕ್ ಆಯಿಲ್ ಟಿನ್ (ಚಿಮಣಿ ಎಣ್ಣೆಯ ಡಬ್ಬಿ) ಒಂದನ್ನು ಒಂದು ಕಡೆ ಇಟ್ಟು ಬಿಡಬೇಕು. ಆ ಡಬ್ಬಿಯು ಮಾತ್ರ ಚಿಮಣಿ ಎಣ್ಣೆಯದೆ ಇರ ಬೇಕಾಗುವುದು, ಇಲ್ಲವಾದರೆ ಥ. ಕ್ಲಾ. ಗಾಡಿಯ ಗುರುತು ಹಿಡಿ ಯುವ ಕಲೆಯನ್ನು ಕಲಿಸಲು ಸಾಧ್ಯವಿಲ್ಲ. ಪ್ರದರ್ಶನದ ಸ್ವಯಂ ಸೇವಕನೊಬ್ಬನು ಅತ್ತಿತ್ತ ನಾಯಿ ಬೆನ್ನು ಹತ್ತಿದವನಂತೆ ಓಡಿ ಬರಬೇಕು: ಇವನು ಥ. ಕ್ಲಾ. ಪ್ರವಾಸಿಗ. ಡಬ್ಬಿಯ ಹತ್ತಿರ ಬಂದ ಕೂಡಲೆ ಅವನ ಮೂಗು ಅರಳುವುದು ಚಿಮಣಿಯ ಎಣ್ಣೆಯ ವಾಸನೆಯಿಂದ; ಥ. ಕ್ಲಾ. ಗಾಡಿಗಾದರೂ ಇಂಥಹದೆ ವಾಸನೆ ಇರುವುದು. ಆ ಮೇಲೆ ಸಂತೋಷದಿಂದ ಡಬ್ಬಿಯ ಮುಚ್ಚ ಳದಲ್ಲಿದ್ದ ಸಣ್ಣ ತೂತಿನಲ್ಲಿ ಹಣಿಕಿಕ್ಕಿ ನೋಡುವನು; ಈ ಸಣ್ಣ ತೂತು ಥ. ಕ್ಲಾ. ಗಾಡಿಯ ಬಾಗಿಲು ಎಂದು ತಿಳಿಯಬೇಕು. ಆ ಮೇಲೆ ಆ ತೂತಿನೊಳಗಿಂದ ತನ್ನ ಇಡಿಯ ದೇಹವನ್ನೆಲ್ಲ ಸ್ವಯಂ ಸೇವಕನು ಡಬ್ಬಿಯೊಳಗೆ ಸೇರಿಸಬೇಕು; ಅವನು ಯಾವ ರೀತಿ ಯಿಂದ ಅದನ್ನು ಸಾಧಿಸುವನೊ ಆ ರೀತಿಯಿಂದ ಥ. ಕ್ಲಾ. ಗಾಡಿ ಯಲ್ಲಿ ಹೋಗತಕ್ಕದು ಎಂದು ಪ್ರೇಕ್ಷಕರಿಗೆ ತಿಳಿದು ಬರುವುದು. ಇದು ಪ್ರದರ್ಶನದ ಒಂದು ಸ್ಟಾಲ್ ( Stall ); ಮುಂದಿನ ಸ್ಟಾಲಿ ನಲ್ಲಿ ಒಂದು ಜೇನು ಹುಟ್ಟನ್ನು ತಂದಿಟ್ಟಿರಬೇಕು; ಪ್ರೇಕ್ಷಕರು ಬಂದು ನೋಡುವಾಗ ಒಂದೊಂದು ಜೇನನ್ನು ತಂದು ಬಿಡಬೇಕು. ಹುಟ್ಟಿನಲ್ಲಿ ಈಗಾಗಲೇ ಸಾವಿರ ಜೇನುಗಳಿದ್ದರೂ ಸಾವಿರದೊಂದ ನೆಯ ಜೇನು ಪ್ರಶಸ್ತವಾಗಿ ಅಲ್ಲಿ ಹೋಗಿ ಕುಳಿತುಕೊಳ್ಳುವುದು. ನೋಡಿದಿರಿಲ್ಲೊ ? ನಡೆಯಿರಿನ್ನು ಮುಂದಿನ ಸ್ಟಾಲಿಗೆ. ಥ. ಕ್ಲಾ. ಕಂಪಾರ್ಟಮೆಂಟಿನ ಒಳಗಿನ ದೃಶ್ಯವನ್ನೂ ಅಲ್ಲಿ ಹೋದಮೇಲೆ ಕುಳಿತುಕೊಳ್ಳುವದು ಹೇಗೆ ಎಂಬುದನ್ನು ಈ ಜೇನು ಹುಟ್ಟಿನ ಪ್ರದರ್ಶನದಿಂದ ನಿಮಗೆ ತೋರಿಸಿದಂತಾಯಿತು. ಇನ್ನೂ ಉಳಿ ಯಿತೇನು ? ಹಂ........ ಕುಳಿತ ಗಾಡಿಯಿಂದ ಇಳಿಯುವುದು

ಹೇಗೆ? ಸರಿ. ಸ್ಟಾಲು ಬಿಟ್ಟು ಹೋಗುವಾಗ ಜೇನು ಹುಟ್ಟಿಗೆ ಕಲ್ಲನ್ನೊಂದು ಎಸೆಯಿರಿ. ಜೇನ್ನೊಣಗಳು ಹೇಗೆ ಕೆಳಗಿಳಿಯು ವುವೊ ಹಾಗೆಯೆ ನೀವೂ ಕೆಳಗಿಳಿಯತಕ್ಕದ್ದು.

ಪ್ರವಾಸದಷ್ಟೇ ಜೀವನಕ್ಕೆ ಅವಶ್ಯವೆನಿಸುವ ಇನ್ನೂ ಕೆಲವು ಸಂಗತಿಗಳಿವೆ. ನಾನು ಹೇಳುವುದಿಷ್ಟೇ, ನನ್ನ ಜೀವನಕ್ಕೆ ಉಪ ಯುಕ್ತ ಎನಿಸುವ ಸಂಗತಿಗಳು ನನಗೆ ಪ್ರದರ್ಶನಗಳಲ್ಲಿ ಬೇಕು ನಾನು ತಕ್ಕಮಟ್ಟಿಗೆ ಸುಶಿಕ್ಷಿತನಿದ್ದೇನೆ, ಇಷ್ಟೇ ಅಲ್ಲ ಸುಶಿಕ್ಷಿ ತರ ಪತಿಯಿಂದ, ಸುಶಿಕ್ಷಿತರ ಹಿತಕ್ಕಾಗಿ ನಾನು ಇದನ್ನು ಬರೆ ಯುತ್ತ ಶಾಲೆ ಕಾಲೇಜುಗಳಲ್ಲಿ ಕಲಿಯುವುದು ಪರೀಕ್ಷೆಗಾಗಿ, ಪ್ರದರ್ಶನಗಳಲ್ಲಿ ಕಲಿಯುವುದು ವ್ಯವಹಾರಕ್ಕಾಗಿ-ಎಂದು ನನ್ನ ದೊಂದು ಸೂತ್ರ; ಅಥವಾ ಬಾದರಾಯಣ ಕಾಲದಿಂದ ಇದೇ ಪರಿಸ್ಥಿತಿ ನಡೆದುಬಂದುದರಿಂದ ಇನು "ಬಾದರಾಯಣ ಸೂತ್ರ" ವೆಂದೇ ಹೇಳೋಣ. ಇರಲಿ; ಇಹಲೋಕದ ಪ್ರವಾಸದ ಅವ ಶ್ಯಕತೆಯನ್ನೂ ಉದಾಹರಣೆಯನ್ನೂ ಮೇಲೆ ತೋರಿಸಿದ್ದೇನೆ. ಅದರಂತೆಯೆ ಪರಲೋಕ ಪ್ರವಾಸದ ಜ್ಞಾನವನ್ನೂ ಪ್ರದರ್ಶನ ದಲ್ಲಿ ಮಾಡಿಕೊಡಬೇಕೆಂದು ನನ್ನ ಅಭಿಪ್ರಾಯ. ಉಚ್ಚ ಜಾತಿ ಗಳಲ್ಲಿ ಅರ್ಥಾತ್ ಭೂಸುರರಾದ ಬ್ರಾಹ್ಮಣ ಜಾತಿಯಲ್ಲಿ ಪರ ಲೋಕ ಪ್ರವಾಸವನ್ನು ಮಾಡುವುದು ಸುಲಭವಾದ ಮಾತಲ್ಲ. ಬ್ರಾಹ್ಮಣನಾದುದರಿಂದ ನಾನು ಮೋಕ್ಷಕ್ಕೇನೋ ಮುಟ್ಟಬಹುದು; ಆದರೆ ಮೊದಲು ಹೊರಡಬೇಕಲ್ಲ! ಫೋರ್ಡ್ ಮಾದರಿಯ ಮೋಟಾರುಗಳ ವಿಷಯವಾಗಿ ಒಂದು ವಿನೋದವಿದೆ, It can do anything except start ಹೊರಡುವು ದೊಂದನ್ನು ಬಿಟ್ಟು ಈ ಗಾಡಿ ಬೇಕಾದ್ದನ್ನು ಮಾಡಬಲ್ಲದು) ಅಂತೆ ಬ್ರಾಹ್ಮಣನ ಪರಲೋಕ ಪ್ರವಾಸವೂ ಹಾಗೆಯೆ, ಬೇನೆ ಬರುವುದು, ಎಲ್ಲ ಆಪ್ತೇಷ್ಟರು ಬರುವರು, ಡಾಕ್ಟರನು ಬರು ವನು, ಕೊನೆಗೆ ಮರಣ ಬರುವುದು; ಇಷ್ಟಾಗುವದೊಂದೇ ತಡ.

ಜಗತ್ತೇ ಬಯಲಾಗುವುದು. ಶವಬಿದ್ದ ಕೂಡಲೆ ಪಕ್ಕದ ಮನೆಯವನಿಗೆ ಮೈಯಲ್ಲಿ ಜಾಡ್ಯವಾಗಿ ಅವನು ಮನೆಯಿಂದ ಕದಲಲಾರನು, ಪಾಪ! ಇನ್ನೊಬ್ಬ ಬ್ರಾಹ್ಮಣನ ಹೆಂಡತಿ ಗರ್ಭಿಣಿ, ಮೂರನೆಯವನಿಗೆ ತಂದೆ-ತಾಯಿಗಳು ಜೀವದಿಂದಿರುವರಂತೆ, ನಾಲ್ಕನೆಯವನು ಬರಲು ಉತ್ಸುಕನಾದರೂ ಬಹಿಷ್ಕೃತನಿದ್ದುದರಿಂದ ಅವನು ಬಂದರೆ ಆ ಹೆಣಕ್ಕೆ ಮೋಕ್ಷವಿಲ್ಲ! ಹೀಗಾಗಿ ಈ ಧಾರ್ಮಿಕ-ಸಾಮಾಜಿಕ-ಆರೋಗ್ಯ ತೊಡಕುಗಳು ಬಿಡುವವರೆಗೆ, ಪಾಪ, ಸತ್ತವನ ದೇಹವು ಸತ್ತಲ್ಲಿಯೆ ಕೊಳೆಯಬೇಕಾಗುವುದು. ನಿಜವಾಗಿ ನೋಡಿದರೆ ಈ ತಪ್ಪು ಯಮದೇವನದು ತಾನು ಜೀವವನ್ನು ಒಯ್ಯುವಾಗ ತನ್ನ ಜೊತೆಗೆ ನಾಲ್ಕು ಯಮದೂತರನ್ನು ತಂದು ಅವರ ಹೆಗಲಮೇಲೆ ಹೆಣವನ್ನು ಸಾಗಿಸಿದರೆ ಆಗದೆ? ಬೇಕಾದರೆ (extra luggage) ಹೆಚ್ಚಿನ ಸಾಮಾನು ಎಂದು ಚಾರ್ಜಮಾಡಲಿ, ಇಲ್ಲವೆ ಮುನಿಸಿಪಾಲಿಟಿ ಗಾಡಿಯಂತೂ ಇದ್ದೇ ಇದೆ. ಅದನ್ನು ಎಳೆಯಲು ತನ್ನ ಕೋಣವನ್ನು ಬಿಟ್ಟಿಯಾಗಿ ಕೊಡಬೇಕು; ಇಲ್ಲವೆ ನೆವಹೇಳಿ ಮನೆಯೊಳಗೆ ಕುಳಿತ ಮಿಕ್ಕ ಬ್ರಾಹ್ಮಣರನ್ನು ತನ್ನ ನಾಯಿಗಳನ್ನು 'ಛೂ, ಬಿಟ್ಟು ಎಬ್ಬಿಸಲಿ. ಆದರೆ ಆ ಧರ್ಮರಾಯನು ಇಂತಹದೊಂದನ್ನೂ ಮಾಡುವುದಿಲ್ಲ. ಡಾಕ್ಟರರ ಬಿಲ್ಲ (bill) ನ್ನು ವಸೂಲು ಮಾಡಲು ಬಂದವನಂತೆ ಜೀವವೊಂದನ್ನು ಒಯ್ದನೆಂದರೆ ಮುಗಿಯಿತು ಅವನ ಕೆಲಸ. ಇನ್ನು ಮಾಡಬೇಕ್ಕೇನು? ಸರಕಾರದವರು ಒಂದು ಕಾಯಿದೆ ಪಾಸು ಮಾಡಬೇಕೆ, ಸಾಯುವವರೆಲ್ಲರೂ ಮೊದಲು ಸ್ಮಶಾನದಲ್ಲಿ ಎಲ್ಲ ವ್ಯವಸ್ಥೆ ಆಗಿದೆಯೆ ಇಲ್ಲವೆ ನೋಡಿಕೊಂಡು ಆ ಮೇಲೆ ಅಲ್ಲಿಯೇ ಹೋಗಿ ವ್ಯವಸ್ಥೆಯ ಮಗ್ಗುಲಲ್ಲಿಯೆ ಸಾಯಬೇಕೆಂದು? ಯಾವನು ಈ ಕಾಯಿದೆಯನ್ನು ಮುರಿಯುವನೊ ಅವನಿಗೆ ದೇಹಾಂತ ಶಿಕ್ಷೆ ಎಂದರೆ ಮಾತ್ರ ಈ ತೊಡಕೇ ಬಗೆಹರಿದಂತಾಯಿತು. ಆದರೇನು? ಸದ್ಯಕ್ಕೆ ಯಮ

ರಾಯನಾಗಲಿ ಸರಕಾರವಾಗಲಿ ನಮ್ಮ ಕೈಯಲ್ಲಿಲ್ಲ; ಆದುದರಿಂದ ಈ ತೊಡಕನ್ನು ನಾವಾಗಿಯೆ ಬಿಡಿಸಿಕೊಳ್ಳಬೇಕು. ಅದಕಾಗಿ ಪ್ರದರ್ಶನವನ್ನೇರ್ಪಡಿಸಬೇಕು. ಅಲ್ಲಿ ಇದರ ವ್ಯವಸ್ಥೆಯನ್ನು ಮಾಡಬೇಕು. Town Planning ನಗರ ಯೋಜನೆ-ಅನ್ನುವ ರಲ್ಲಾ ಅಂತಹದೊಂದು ಮಾದರಿಯ ನಕಾಶೆಯನ್ನು ತೋರಿಸ ಬೇಕು. ಮನೆಗಳನ್ನು ಹೇಗೆ ಕಟ್ಟಿಸಬೇಕು-ಎಂಬುದರ ಜ್ಞಾನವು ಈ ನಕಾಶೆಯನ್ನು ನೋಡಿ ನಮಗಾಗಬೇಕು- ನೆರೆಮನೆಯವರಿಗೆ ನೆಗಡಿ-ಕೆಮ್ಮುಗಳಿರಬಾರದು, ತಂದೆತಾಯಿಗಳಿರಬಾರದು, ಬಹಿ ಷ್ಕಾರವಿರಬಾರದು, ಗರ್ಭವತಿ ಹೆಂಡತಿ ಇರಬಾರದು - ಇಂತಹರ ಮನೆಗಳ ನಡುವೆ ನಮ್ಮ ಮನೆ ಇರಬೇಕು. ಇದು ಒಂದು ಯೋಜನೆ. ಇಲ್ಲವೆ ನಮ್ಮ ಮನೆಯಲ್ಲಿಯೆ ರೋಗಿಯ ಕೋಣೆ ಯೂ ಉರುವಲ ಕಟ್ಟಿಗೆಯನ್ನಿಡುವ ಕೋಣೆಯೂ ಒಂದೇ ಆಗುವಂತಿರಬೇಕು. ಇಲ್ಲವ - ಸಾಯುವಾಗ ಜೀವದ ಕೂಡ ದೇಹವೂ ಹಾರಿ ಹೋಗುವಂತಹ ಯೋಗಸಾಧನೆಯಿರಬೇಕು. ನಾನೇನು ಕಿಡಿಗೇಡಿತನದಿಂದಾಗಲಿ ಹೇಸಿತನದಿಂದಾಗಲಿ ಇದನ್ನು ಬರೆಯುವೆನೆಂದು ಭಾವಿಸಬಾರದು. ರಣಾಂಗಣದಲ್ಲಿ ಗತಿ ಇಲ್ಲದೆ ಬಿದ್ದಂತೆ ಮನೆಯಲ್ಲಿ ಬಿದ್ದುಕೊಳ್ಳುವ ಉಚ್ಚಜಾತಿಯ ಶವಗಳನ್ನು ನೋಡಿದವರಿಗೆ ನನ್ನ ಮಾತಿನ ಆವಶ್ಯಕತೆ ಕಂಡುಬರುವದು. *

---

* ಮೇಲಿನ ಮಾತುಗಳಿಂದ ನಾನೇನೊ ಜಾತಿಯ ದುರಭಿಮಾನಿ ಎಂದು ಮಿಕ್ಕ ಜಾತಿಯವರ ಕಲ್ಪನೆಯಾಗಬಹುದು. ಆದರೆ ಕೇವಲ ನನ್ನ ಜಾತಿಯವೆ ಹಿತವನ್ನು ಮಾಡಬೇಕೆಂದು ನಾನು ಬರೆದಿಲ್ಲ, ಉದಾಹರಣೆ ಎಂದು ತೋರಿಸಿದ್ದೇನೆ ಇಷ್ಟೆ. ಹಾಗೆ ನೋಡಿದರೆ ಎಲ್ಲ ಜಾತಿಯವರಿಗೂ ಅಂತಹ ವ್ಯವಸ್ಥೆಯಾಗಬೇಕೆಂದು ನನ್ನ ನಿಷ್ಪಕ್ಷಪಾತದ ಅಭಿಪ್ರಾಯ. ಇದಲ್ಲದೆ ಹಿಂದುಳಿದ ಜಾತಿಯವರಿಗಾಗಿ ಸ್ಪೇಶಿಲ್ ವ್ಯವಸ್ಥೆ ಮಾಡಿದರೂ, ನನ್ನ ಅಡ್ಡಿ ಇಲ್ಲ ಅಥವಾ ಬ್ರಾಹ್ಮಣನ ಒಂದು ದೇಹದ ವ್ಯವಸ್ಥೆಯಾದರೆ ಮಿಕ್ಕ ಜಾತಿಯವರ ಮೂರು ದೇಹಗಳನ್ನೊಯ್ಯಬೇಕು-ಎಂದು ಪ್ರಮಾಣ ವನ್ನು ಗೊತ್ತುಮಾಡಿದರೂ ಅಡ್ಡಿ ಇಲ್ಲ. ಇಲ್ಲವೆ ದಿವಂಗತ ರ್‍ಯಾಮ್ಸೇ ಮ್ಯಾಕ್‍ಡೊನಾಲ್ಡರು ಪ್ರೇತನಿರ್ಣಯವನ್ನು ( Funeral Award ) ಕೊಟ್ಟರೂ ನಡೆಯುವುದು.

ಹೋಗಲಿ, ನಾನು ಬರೆಯುವುದು ಪ್ರದರ್ಶನದ ತತ್ವವನ್ನು ವಿವರಿಸುವುದಕ್ಕಾಗಿ, ಪ್ರೇತ ಸಂಸ್ಕಾರದ ನಿಯಮಗಳನ್ನು ಹೇಳುವುದಕ್ಕಾಗಿ ಅಲ್ಲ. ಇದಲ್ಲದೆ ಇದೇ ವಿಷಯವನ್ನು ವಿಸ್ತಾರಗೊಳಿಸ ತೊಡಗಿದೆನೆಂದರೆ ಕೆಲವು ಕುಚೇಷ್ಟೆಯ ವಿದ್ಯಾರ್ಥಿಗಳು ಸಾಹಿತ್ಯಕ್ಕೂ ಗತ ಜೀವನಕ್ಕೂ ಸಂಬಂಧವಿದೆ ಎಂಬ ತಲೆ ತಿರುಕತನದ ತತ್ವವನ್ನು ನಾನು ಹೇಳುತ್ತಿರುವೆ....... ಎಂದು ಪ್ರಚಾರಗೊಳಿಸಬಹುದು. ವಿದ್ಯಾರ್ಥಿಗಳೆಂದ ಮಾತ್ರಕ್ಕೆ ಸ್ಮರಣೆಗೆ ಬಂದಿತು. ವಿದ್ಯಾರ್ಥಿಗಳು ಅರ್ಥಾತ್ ತರುಣರು ಭಾರತದ ಭಾವೀ ಭಾಗ್ಯೋದಯದ ಆಧಾರಸ್ತಂಭರೆಂದು ಮಹಾನ್ ಮಹಾನ್ ಮುಂದಾಳುಗಳೆಲ್ಲ ಹೇಳುತ್ತಿದ್ದಾರೆ. ನಮ್ಮ ದೇಶಕ್ಕೆ, ಸಮಾಜಕ್ಕೆ ಸ್ತಂಭಗಳು ಅವಶ್ಯ ಎಂಬುದು ನಿರ್ವಿವಾದ ವಿಷಯವಾಗಿದೆ. ಇಷ್ಟು ದಿವಸಗಳ ವರೆಗೆ ಕೂರ್ಮಾವತಾರದ ಬೆನ್ನಿನ ಮೇಲೆ ನಿಂತಿತ್ತು ನಮ್ಮ ದೇಶ. ಅದಕಾಗಿ ಕೂರ್ಮ ನಡೆದಲ್ಲಿ ನಮ್ಮ ದೇಶ ನಡೆಯುತ್ತಿತು. ಈ ಕೂರ್ಮ (=ಆವೆ) ಗತಿಯಿಂದ ದಾರಿ ಒತ್ತರನಾಗಿ ಸಾಗುವುದಿಲ್ಲ ಎಂಬುದು ಅನುಭವ ಸಿದ್ಧವಾದ ಮಾತು. ಈ ಕೂರ್ಮಗತಿಯಿಂದ ನಾವು ಮಿಕ್ಕ ದೇಶಗಳಿಗಿಂತ ಹಿಂದುಳಿದಿದ್ದರೆ ಅದು ನಮ್ಮ ದೋಷ, ಕೂರ್ಮದ ದೋಷವಲ್ಲ. ಇದನ್ನರಿತೇ ಮುಂದಾಳುಗಳು ಇಂದು ನಮ್ಮ ದೇಶವನ್ನು ವಿದ್ಯಾರ್ಥಿಗಳ ಅರ್ಥಾತ್ ತರುಣರ ಬೆನ್ನಮೇಲೆ ಇಟ್ಟಿದ್ದಾರೆ. ಆದರೆ ತರುಣರಿಗೆ ಈ ಸ್ತಂಭ—ತತ್ವದ ಅರ್ಥವಾದಂತಿಲ್ಲ. ಅವರಿಗೆ ಅರ್ಥವಾಗದಿದ್ದರೆ ನಮ್ಮ ದೇಶ ಮುಂದೆ ಸಾಗುವಂತಿಲ್ಲ. ದೇಶವು ತಮ್ಮ ಬೆನ್ನು ಕಟ್ಟಿಕೊಂಡದ್ದರಿಂದ ತಾವು ಹೋದಲ್ಲಿ ಅದೂ ಹೋಗಲೆಬೇಕಾಗುವುದು ಎಂಬುದನ್ನು ಅವರು ಮರೆತಂತೆ ಕಾಣುವುದು. ತರುಣರು ಹೋಗುವುದೆಂದರೆ ಪರೀಕ್ಷೆಯ ಪೆಂಡಾಲು (Pendal) ಗಳಿಗೆ, ಅರ್ಥಾತ್ ನಮ್ಮ ದೇಶವೂ ಅದಕ್ಕಿಂತ ಮುಂದೆ ಹೋಗಲು ಸಾಧ್ಯವಾಗಿಲ್ಲ. ಇದಲ್ಲದೆ ತರುಣರಿಗೆ

ಮಾತು ಮಾತಿಗೆ ಕಟೆದು ನಿಂತು ಚಪ್ಪಾಳೆ ಬಾರಿಸುವ ಹುರುಪು ಹೆಚ್ಚು. ಹೀಗೆ ಕೈ ಬಿಟ್ಟು ಎದ್ದು ನಿಂತರೆ ಬೆನ್ನ ಮೇಲಿದ್ದ ದೇಶವು ಜಾರಿ ನೆಲಕ್ಕೆ ಕುಪ್ಪಳಿಸುವ ಹೆದರಿಕೆ ಹೆಚ್ಚು. ಇದನ್ನೆಲ್ಲ ತಿಳುಹಿಸಿ ಕೊಡಲು ಒಂದು ಪ್ರದರ್ಶನವನ್ನೇರ್ಪಡಿಸಿದರೆ ಒಳಿತಾಗಲಿಕ್ಕಿಲ್ಲವೆ? ಉದಾಹರಣೆಗಾಗಿ, ಒಂದು ಕಲ್ಲಿನ ಕಂಬ, ಒಂದು ಕಟ್ಟಿಗೆಯ ಕಂಬ, ಎರಡನ್ನೂ ಒಂದರ ಬದಿಗೊಂದು ನಿಲ್ಲಿಸಬೇಕು. ಎರಡೂ ಕಂಬಗಳ ಸುತ್ತು ಅನೇಕ ತರದ ಕ್ರಿಮಿ ಕೀಟಕಗಳನ್ನೂ ತಗಣಿ-ತಂಡಗಳನ್ನೂ ಹರಿ ಬಿಡಬೇಕು. ಸ್ವಲ್ಪಾವಧಿಯಲ್ಲಿಯೆ ಕಟ್ಟಿಗೆಯ ಕಂಬ ಸಡಿಲಾಗುವುದು, ಪೊಳ್ಳಾಗುವುದು, ಸಮೀಪಕ್ಕೆ ಯಾರನ್ನೂ ಬರಗೊಡದಂತಹದಾಗುವುದು. ಅರ್ಥವೇನು? 'ತರುಣರೇ' ನೀವು ಕಂಬಗಳೇನೊ ನಿಜ, ಆದರೆ ಕಂಬಗಳಾಗಿಯೆ ಉಳಿಯ ಬೇಕಾದರೆ ಕಟ್ಟಿಗೆಯ ಕಂಬವಾಗ ಬೇಡಿರಿ, ಕಲ್ಲಿನ ಕಂಬವಾಗಿರಿ' ಎಂಬ ಸತ್ಯವು ಕಣ್ಣು ಕಟ್ಟಿ ನಿಲ್ಲುವುದು.

ಕ್ಷಮೆ ಇರಲಿ. ನಾನು ಕತೆ ಹೇಳುತ್ತಿರುವದಿಲ್ಲ. ಹೀಗೆಯೆ ದೃಷ್ಟಾಂತಗಳನ್ನು ಬೆಳೆಸಲಿಕ್ಕೆ. 'ಈಗ ನೋಡಿದಲ್ಲೆಲ್ಲ ಪ್ರದರ್ಶನಗಳ ಹುಚ್ಚು,' ಎಂದು ಮೊದಲೇ ಹೇಳಿದ್ದೇನೆ. 'ನಾನು ಬರೆದುದನ್ನು ಓದಿದ ಮೇಲೆ ನೋಡಿದಲ್ಲೆಲ್ಲ "ಪ್ರದರ್ಶನಗಳ ಜಾಣತನ" ಕಂಡು ಬಂದರೆ ನಾನು ಕೃತಾರ್ಥನಾಗುವೆ ಎಂದರೆ ಇನ್ನು ಮುಂದೆ ಹೀಗೆ ಬರೆಯುವದನ್ನೆ ಬಿಟ್ಟು ಕೊಡುವೆ. ಇದನ್ನೋದಿದವರೂ ಇದನ್ನು ಮರೆತುಬಿಡಬಹುದು.



# ಪರಿಚಯ.

ಶ್ರೀ ರಂಗರ ಪೂರ್ಣ ಹೆಸರು ಆರ್. ವ್ಹಿ. ಜಾಗಿರದಾರ. ಕರ್ನಾಟಕ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಉತ್ತರ ಕರ್ನಾಟಕದಲ್ಲಿ ಹೊಸ ಬಗೆಯ ನಾಟಕಗಳ ಆದ್ಯಪ್ರವರ್ತಕರು. ನಾಟ್ಯರಂಗದಲ್ಲಲ್ಲದೆ ಸಾಹಿತ್ಯದ ಎಲ್ಲ ಭಾಗಗಳಲ್ಲಿಯೂ ಇವರು ಪ್ರಸಿದ್ಧಿಯನ್ನು ಹೊಂದಿದ್ದಾರೆ. "ಆಹ್ವಾನ" ಎಂಬ ಕವನ ಸಂಗ್ರಹವನ್ನೂ ಪ್ರಕಟಿಸಿದ್ದಾರೆ.

ಇವರು ಸಮಾಜವನ್ನು ಸುಧಾರಿಸಲು ತಮ್ಮ ಲೇಖಣಿಯನ್ನು ಅಣಿಗೊಳಿಸಿದ್ದಾರೆ. ಇವರ ಶೈಲಿಯ ಜೀವ ಜೀವಾಳ ವ್ಯಂಗ್ಯ ಮತ್ತು ಹಾಸ್ಯ. ಇವರ ವೈಶಿಷ್ಟ್ಯ "ತಲೆತುಂಬ ವಿಚಾರ ಮತ್ತು ಹೊಟ್ಟೆತುಂಬ ನಗೆ" !

ಇಲ್ಲಿ ಎತ್ತಿಕೊಂಡ ಭಾಗ 'ಸ್ವಲ್ಪದ್ರಲ್ಲಿ ಸ್ವಾರಸ್ಯ' ಎಂಬ ಪುಸ್ತಕದಿಂದ. ಇದರಲ್ಲಿ ಮೂರನೆ ತರಗತಿಯ ಪ್ರಯಾಣಿಕರ ಪ್ರವಾಸವು ಎಷ್ಟು ಪ್ರಯಾಸಕರದ್ದಾಗಿದೆ ಎಂಬುದನ್ನು ಒಳ್ಳೇ ವ್ಯಂಗ್ಯವಾಗಿ ಮತ್ತು ಹಾಸ್ಯಮಯವಾಗಿ ತೋರಿಸಿಕೊಟ್ಟಿದ್ದಾರೆ. ಇವರ ತರ್ಕಬದ್ಧವಾದ ಬರವಣಿಗೆ ಎಂತಹ ತಜ್ಞರನ್ನೂ ತಲೆದೂಗಿಸುತ್ತದೆ.

ಇವರ ಪೂರ್ಣ ಚರಿತ್ರೆಯನ್ನು ತಿಳಿಯಲಿಚ್ಛಿಸುವವರು 'ನೆರಂಗ'ರು ಬರೆದ "ಶ್ರೀರಂಗ" ಎಂಬ ಪುಸ್ತಕವನ್ನು ಓದುವದೊಳಿತು.

## ಅಭ್ಯಾಸ

(೧) ಈ ಲೇಖವು ಹರಟೆಯ ರೀತಿಯದು ರೂಪದ್ದು. ಹರಟೆ ಹೊಸಗನ್ನಡ ಸಾಹಿತ್ಯದಲ್ಲಿ ಒಂದು ಹೊಸ ರೀತಿ. ಅದು ಮಾರ್ಮಿಕವಾದದ್ದೂ ಮನೋರಂಜಕವಾದದ್ದೂ ಆಗಿದೆ. ಕನ್ನಡದಲ್ಲಿ ಒಳ್ಳೇ ಹರಟೆಗಾರರಾದ ಶ್ರೀ ಎ. ಎನ್. ಮೂರ್ತಿರಾವ, ನಾ. ಕಸ್ತೂರಿ, ಬೇಂದ್ರೆ ಮೊದಲಾದವರ ಒಂದೊಂದು ಹರಟೆಯನ್ನು ಓದಿರಿ.

(೨) ನೀವು ಓದಿತ್ತಿರುವ ಸಾಪ್ತಾಹಿಕ ಮಾಸಿಕ ಪತ್ರಗಳಲ್ಲಿ ಹರಟೆಗಳನ್ನು ಕಂಡಿದ್ದರೆ ಆ ಲೇಖಕರ ಹೆಸರುಗಳನ್ನೂ ಆ ಹರಟೆಯ ವಿಷಯಗಳನ್ನೂ ಹೇಳಿರಿ.

(೩) ಹರಟೆಯ ಮುಖ್ಯ ಲಕ್ಷಣಗಳು—ಆತ್ಮಾನುಭವ, ವ್ಯಾಪಕ ನಿರೀಕ್ಷಣೆ, ಸುಲಭ ವಿಷಯುಗಳಲ್ಲಿ ಗಾಂಭೀರ್ಯವನ್ನೂ ಗಂಭೀರ ವಿಷಯುಗಳಲ್ಲಿ

ಸಾಮಾನ್ಯತೆಯನ್ನೂ ತರುವದು' ಪರಿಚಿತವಸ್ತುಗಳಲ್ಲಿ ನವೀನತೆಯನ್ನು ಕಾಣುವದು, ಹಾಸ್ಯದ ಪ್ರಾಚುರ್ಯ, ಮೊದಲಾದವುಗಳಿವೆ. ಇವುಗಳಲ್ಲಿ ಯಾವ ಮಾತುಗಳನ್ನು ನೀವು ಇಲ್ಲಿ ಕಾಣುವಿರಿ. ?

(೪) ಲೇಖಕನ ವ್ಯಕ್ತಿತ್ವವು ಹರಟೆಯಲ್ಲಿ ಬೆರೆತೂ ಸಿಡಿದು ಬೇರೆಯಾಗಿ ನಿಲ್ಲುತ್ತದೆ. ಈ ವಿಧಾನವು ಜಹಗೀರದಾರರ ವ್ಯಕ್ತಿತ್ವಕ್ಕೆ ಹೇಗೆ ಅನ್ವಯಿಸುತ್ತದೆ?

(೫) ವಿನೋದದಲ್ಲಿ ವಿವಿಧ ಪ್ರಕಾರಗಳಿವೆ. ಆದರೆ ಇಲ್ಲಿ ಲೇಖರು ಉಚ್ಚತರಗತಿಯ ವಿನೋದವನ್ನು ಹೇಗೆ ಸಾಧಿಸಿದ್ದಾರೆ ?

(೬) ಹಾಸ್ಯವನ್ನು ಹುಟ್ಟಿಸಲು ಲೇಖಕರು ಯಾವ ಯಾವ ಸನ್ನಿವೇಶ ಗಳನ್ನು ಹೇಗೆ ಹೇಗೆ ಬಳಸಿದ್ದಾರೆ?

(೭) ಮೋಟಾರ ಪ್ರವಾಸ, ವಿದ್ಯಾರ್ಥಿಗಳ ಸಮ್ಮೇಲನ, ಇವುಗಳಲ್ಲೊಂದರ ಮೇಲೆ ಒಂದು ಹರಟೆಯನ್ನು ಬರೆಯಿರಿ.

(೮) ಶ್ರೀ. ರಾಜರತ್ನಂರವರ 'ನಕ್ಕಳಾತಾಯಿ' ಎಂಬ ಹೊತ್ತಿಗೆ ಯನ್ನು ಓದಿ ಹಳಗನ್ನಡ ಕವಿಗಳ ಹಾಸ್ಯವನ್ನು ತಿಳಿದುಕೊಳ್ಳಿರಿ.



# ಬಸವೇಶ್ವರರ ವಚನಗಳು



ಒಲೆ ಹತ್ತಿ ಉರಿದಡೆ ನಿಲ್ಲಬಹುದಲ್ಲದೆ, ಧರೆ ಹತ್ತಿ ಉರಿದಡೆ ನಿಲ್ಲಬಹುದೇ? ಏರಿ ನೀರುಂಬಡೆ, ಬೇಲಿಕೆಯ್ಯ ಮೇವಡೆ, ನಾರಿ ತನ್ನ ಮನೆಯಲ್ಲಿ ಕಳುವಡೆ, ತಾಯ ಮೊಲೆವಾಲು ನಂಜಾಗಿ ಕೊಲುವಡೆ, ಇನ್ನಾರಿಗೆ ದೂರುವೆ ಕೂಡಲ ಸಂಗಮದೇವಾ!

ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ ಎನ್ನ ಬಾಳುವೆ. ಸಂಸಾರ ಸಂಗವ ಬಿಡದು ನೋಡೆನ್ನ ಮನವು. ಈ ನಾಯಿತನವ ಮಾಣಿಸು ಕೂಡಲ ಸಂಗಮದೇವ ನಿಮ್ಮ ಧರ್ಮ.

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬಾ, ಅಂಬಾ, ಎಂದು ಕರೆವುತ್ತಲಿದ್ದೇನೆ; ಅಂಬಾ, ಅಂಬಾ, ಎಂದು ಒರಲುತ್ತಲಿದ್ದೇನೆ, ಕೂಡಲಸಂಗಮದೇವ ಬಾಳು ಬಾಳೆಂಬನ್ನಕ್ಕ.

ಎನಸು ಕಾಲ ಕಲ್ಲು ನೀರೊಳಗಿದ್ದರೇನು, ನೆನೆದು ಮೃದುವಾಗಬಲ್ಲುದೇ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ? ನಿಧಾನವ ಕಾಯ್ದಿದ್ದ ಬೆಂತರನಂತೆ ಅದರ ವಿಧಿ ಎನಗಾಯಿತ್ತು ಕೂಡಲಸಂಗಮದೇವಾ.

ಹೊರಿಸಿಕೊಂಡ ಹೋದ ನಾಯಿ ಮೊಲನೇನ ಹಿಡಿವುದಯ್ಯಾ? ಇರಿಯದ ವೀರ ಇಲ್ಲದ ಸೊಬಗುವ ಹೇಳುವುದೇ ನಾಚಿಕೆ. ಆನು ಭಕ್ತನೆಂತೆಂಬನಯ್ಯ ಕೂಡಲಸಂಗಮದೇವ!

ಚಕೋರಂಗೆ ಚಂದ್ರಮನ ಬೆಳದಿಂಗಳಚಿಂತೆ. ಅಂಬುಜಕ್ಕೆ ಭಾನುವಿನ ಉದಯದ ಚಿಂತೆ. ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ. ಎನಗೆ ನಮ್ಮ ಕೂಡಲ ಸಂಗಮ ದೇವರ ಚಿಂತೆ.

ಹೊಲಬುಗೆಟ್ಟ ಶಿಸು ತನ್ನ ತಾಯನರಸುವಂತೆ, ಬಳಿ ತಪ್ಪಿದ ಪಶು ತನ್ನ ಹಿಂಡನರಸುವಂತೆ, ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು. ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು. ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ ಎನಗೆ ನಿಮ್ಮ ಶರಣರ ಬರವು ಕೂಡಲ ಸಂಗಮ ದೇವಾ!

ಎನಗೆ ನಿಮ್ಮ ನೆನಹಾದಾಗವೇ ಉದಯ. ಎನಗೆ ನಿಮ್ಮ ಮರಹಾದಾಗವೇ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವ ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ, ಸ್ವಾಮೀ! ಎನ್ನ ಹೃದಯದಲ್ಲಿ ನಿಮ್ಮ ಚರಣಮುಂಡಿಗೆಯನೊತ್ತಯ್ಯಾ! ವದನದಲ್ಲಿ ಷಡಕ್ಷರಿಯ ಬರೆಯಯ್ಯಾ ಕೂಡಲ ಸಂಗಮ ದೇವಾ.

ಹಬ್ಬಕ್ಕೆ ತಂದ ಹರಕೆಯಕುರಿ, ತೋರಣಕ್ಕೆ ತಂದ ತಳಿರ ಮೇಯಿತ್ತು. ಕೊಂದಹರೆಂಬುದನರಿಯದೆ ಬೆಂದೊಡಲ ಹೊರೆಯುತ್ತಲಿದೆ. ಅಂದಂದೆ ಹುಟ್ಟಿತ್ತು ಅಂದಂದೆ ಹೊಂದಿತ್ತು. ಕೊಂದವರುಳಿದರೆ ಕೂಡಲ ಸಂಗಮ ದೇವಾ?

ಆಡಿದರೇನು ಹಾಡಿದರೇನು ಓದಿದರೇನು, ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೇ ನವಿಲು? ಹಾಡದೇ ತಂತಿ? ಓದದೇ ಗಿಣಿ? ಭಕ್ತಿ ಇಲ್ಲದವರನೊಲ್ಲ ಕೂಡಲ ಸಂಗಮ ದೇವ.

ನೀರ ಕಂಡಲ್ಲಿ ಮುಳುಗುವರಯ್ಯಾ. ಮರನ ಕಂಡಲ್ಲಿ ಸುತ್ತುವರಯ್ಯಾ. ಬತ್ತುವ ಜಲವ ಒಣಗುವ ಮರನ ಮೆಚ್ಚಿದವರು ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ!

ಕುರಿವಿಂಡು ಕಬ್ಬಿನ ಉಲಿವ ತೋಟವ ಹೊಕ್ಕು ತೆರನನರಿಯದೆ ತನಿರಸದ ಪೊರಗಣ ಎಲೆಯನು ಮೆಲಿದವು, ನಿಮ್ಮ ನರಿವ ಮದಕರಿಯಲ್ಲದೆ ಕುರಿಬಲ್ಲುದೇ ಕೂಡಲಸಂಗಮದೇವಾ?

# ಪರಿಚಯ

ಕನ್ನಡ ಸಾಹಿತ್ಯಕ್ಕೆ ಮೂಲವಾಗಿರುವ ವಚನ ಸಾಹಿತ್ಯವು ೧೨ನೆಯ ಶತಮಾನದಲ್ಲಿ ವಿಶೇಷ ಪ್ರಚಾರದಲ್ಲಿ ಬಂದಿತು. ಶ್ರೀ ಬಸವೇಶ್ವರ, ಅಲ್ಲಮ ಪ್ರಭು, ಮಹಾದೇವಿಯಕ್ಕ, ಮಡಿವಾಳ ಮಾಚಯ್ಯ ಮೊದಲಾದ ಅಸಂಖ್ಯಾತ ಶಿವಶರಣರು ತಮ್ಮ ಮನೋಭಾವಗಳನ್ನು ವಚನಗಳಲ್ಲಿ ಚಿತ್ರಿಸಿದ್ದಾರೆ. ಆದುದರಿಂದಲೇ ಅವು ಚಿಕ್ಕವಾಗಿ ಬಿಡಿಬಿಡಿಯಾಗಿವೆ. ಒಂದೊಂದು ವಚನವೂ ಒಂದೊಂದು ವಿಚಾರವನ್ನು ಬಿಡಿಯಾಗಿ ಇಡಿಯಾಗಿ ಹೇಳುತ್ತಿದೆ. ಕನ್ನಡದ ದೇಸಿಯ ಚೆಲುವನ್ನು ನಾವು ಈ ವಚನಗಳಲ್ಲಿ ಕಾಣಬಹುದು. ಗದ್ಯವಾದರೂ ಛಂದೋಬದ್ಧತೆಯ ಸೂಕ್ಷ್ಮ ಲಕ್ಷಣಗಳು ಇಲ್ಲವೆ ವಚನಗಳನ್ನು ಹೇಳುವ ವಿಶಿಷ್ಟ ರೀತಿಯಿದೆ. ಇತ್ತೀಚಿಗೆ ಇವುಗಳನ್ನು ಸಂಗೀತ ಧಾಟಗಳಲ್ಲಿ ಹೇಳುವ ಪ್ರಯತ್ನ ನಡೆಯುಹತ್ತಿದೆ.

ಶ್ರೀ ಬಸವೇಶ್ವರರ ಕಾಲ ೧೨ನೆಯ ಶತಮಾನದ ಮಧ್ಯಭಾಗ.

## ಅಭ್ಯಾಸ

೧ ಈ ವಚನಗಳಲ್ಲಿ ಯಾವ ಮನೋಭಾವವು ನಿಮಗೆ ತೋರುತ್ತದೆ?

೨ ವಚಗಳ ಶೈಲಿಯ ವೈಶಿಷ್ಟ್ಯವನ್ನು ಲಕ್ಷಿಸಿರಿ. ಸಾಮಾನ್ಯ ಗದ್ಯಕ್ಕೂ ಇವುಗಳಿಗೂ ಯಾವ ಭೇದವು ನಿಮಗೆ ತೋರುವದು?

೩ ಒಂದೊಂದು ವಚನವು ಭಕ್ತನ ಒಂದೊಂದು ಮನಸ್ಥಿತಿಯನ್ನು ಹೇಳುವದು. ಅದು ಹೇಗೆ ಎಂಬುದನ್ನು ತಿಳಿಸಿರಿ.

೪ ಇಲ್ಲಿ ಬಳಸಿದ ಉಪಮೆಗಳನ್ನು ಹೇಳಿ ಅವುಗಳ ಔಚಿತ್ಯವನ್ನು ಸ್ಪಷ್ಟೀಕರಿಸಿರಿ.

೫ ಈ ವಚನಗಳ ಶೈಲಿಯನ್ನು 'ಅಂತರಾತ್ಮನಿಗೆ' ಇದರಲ್ಲಿಯ ವಚನಗಳ ಶೈಲಿಗೆ ಹೋಲಿಸಿರಿ.

೬ ಅಕ್ಕಮಹಾದೇವಿ, ಅಲ್ಲಮಪ್ರಭು, ಸಿದ್ಧರಾಮ, ಚೆನ್ನಬಸವ ಮೊದಲಾದವರ ವಚನಗಳನ್ನು ಓದಿರಿ ಮತ್ತು ಅಂಕಿತಗಳನ್ನು ಸಂಗ್ರಹಿಸಿರಿ.



# ತಪಸ್ವಿನೀ



**ಊರ್ಮಿಳಾ:**— ನಾಥ ! ಕಶಲಮೋ ?

**ಲಕ್ಷ್ಮಣ:**— ನಿನ್ನ ಪಣ್ಯದ ಬಲದಿ, ಎನಗೆ ಕುಶಲವೆ. ದೇವಿ ನಿನ್ನ ತಪ ಮುಗಿದುದೋ ?

ಊ:— ಈಗಳೇ ಸಿದ್ಧಿ .

ಲ:— ನಾ ಬದ್ಧನಾದೆನು ನಿನ್ನ ಸಿದ್ಧಿಯಲಿ. ಪರಿಶುದ್ಧನಾದೆ, ಬಾ ದೇವಿ !

ಊ:— ( ಎರಗುವಳು )

ಲ:— (ಪಿಡಿದೆತ್ತಿ)ಶುಭೆಯಾಗು; ಸುಖಿಯಾಗು. ಸುಖವನೀಡೆನೆಗೆ, ನಿನ್ನೊಲವ ಗೆಲವೆನ್ನ ಸಿದ್ಧಿ.

ಊ:— ಎನ್ನಿನಿಯ ! ಗೆಲುವು ನಿನ್ನದು. ಗೆಲವಿನಾನಂದ ಎನ್ನದು! ಎನ್ನೊಲವು ನಿನ್ನ ಸಿದ್ಧಿಯಲಿ ಸಾರ್ಥಕವಾಯ್ತು. ಸುಲಭವಾಗಿರ್ದುದೋ ? ಶ್ರಮವೆನಿಸಿತೋ ನಿನಗೆ ಅಗಲಿಕೆಯ

ದೀರ್ಘಕಾಲವು. ಮನವು ಬಗ್ಗಿತೋ ?

ಲ:— ಬಗ್ಗಿಸಿತು ಕರ್ಮಬಲ.

ಊ:— ನಿನ್ನ ಸಂಕಲ್ಪ ಬಲ. ವೈರಾಗ್ಯ ಭಾಗ್ಯಕೆ ಅಪೂರ್ವಕಳೆ ಯೇರಿಸಿತು ನಿನ್ನ ಛಲ. ನಿನ್ನ ಸಂಸ್ಕಾರ ಬಲಮತಿಶಯವು

ಲ: ಎನ್ನ ಛಲಮಲ್ಲನವು. ನಿನ್ನ ಮನದುನ್ನತಿಯು. ನಿನ್ನ ಸ್ಥೈರ್ಯವು. ನಿನ್ನ ಶ್ರದ್ಧೆಯದ್ಭುತವು. ನಿನ್ನ ಧರ್ಮದ ಬಲವೆ

ಎನ್ನ ಜೀವದ ಕಳೆಯು. ನಿನ್ನ ಪ್ರೇಮದ ಗೆಲುವೆ
ಎನ್ನ ಪೆರ್ಮೆಯು ದೇವಿ. ಸಂಕಲ್ಪ ಸಾಧನೆಗೆ ಅಗಲಿದೆನು
ನಿನ್ನ. ನೇರವೆನ್ನದು.

ಊ:— ನೇರವಲ್ಲ. ಉಪಕಾರವೋ. ಉಭಯ ಜೀವನದ ಶೋಧನೆಗೊಂದು ಅವಕಾಶವಾಯ್ತು.

ಲ:— ನೀವಾ ಸುಖದ ಅನುಭವವು ಆಯ್ತು.

ಊ:— ಎಮ್ಮ ಜೀವನದ ಸುಖದುಃಖಮಂತಿರಲೀಗ,
ವಿಪಿನ ವಾಸದ ಕತೆಯನೊಂದಿನಿತು ಪೇಳು.
ಊಳಿಗವೋ ? ಕಾಳಗವೋ ? ಕಜ್ಜವಾವುದು ವನದಿ ?

ಲ: ಕಾಳಗದಿ ಊಳಿಗದಿ ಬೆರೆದ ಕಜ್ಜವು ನಮಗೆ.
ಬಡತನದ ಬಾಳ್ಕೆಯೇನಿಮಿತ ಹಿತವಾಗಿಹುದು ?
ವನವಾಸರ ಜೀವನದ ಸುಖಸಾರವನು.
ಪ್ರಮೆಯ ಮರೆಸಿತು ವನದ ಖಗಮೃಗದ ಸಾಮಾಸ,
ಮುನಿಜನರ ಮನವ ಮೆಚ್ಚಿಸುದೆ ಒಂದಾನಂದ.
ರಾಜ ಮರ್ಯಾದೆಗಳ ಬಿನ್ನಾಣಕೆಡೆಇಲ್ಲ.
ರಾಜ ಭೋಗಗಳಲ್ಲಿ ಬಯಕೆಯೇ ಇಲ್ಲ
ಶುದ್ಧವಾದೊಂದು ಸ್ವಾತಂತ್ರ್ಯ ದೊರೆತದು ನಮಗೆ
ವಿಕೃತಿಯೊಂದದ ಜೀವನದ ನಲವನರಿತೆವು.
ಸುಖದೊಳಿದ್ದೆವು ಪಂಚವಟಿಯೊಳಾಶ್ರಮದಿ.
ಕಾವಲಿರ್ದುದು ನಿನ್ನ ಪ್ರೇಮ ಬಲವೆನಗಲ್ಲಿ.

ಊ:— ಮನವು ಎಣೆಯಿಲ್ಲದಾನಂದವೊಡವೆರಸಿಹುದು;
ನುಡಿಸುತಿದೆ ನಿಮ್ಮನೀ ಪರಿಯೊಳಾ ಮಾತಿರಲಿ;
ಪಂಚವಟಿ ಮಾತ ಮುಂದರಿಸಿ.

ಲ:— ಚಿತ್ತರಿಸೆ.
ಹಲಕಾಲ ನೂಕಿದೆವು ನಿರ್ವಿಚಾರದಲಿ.
ನಗೆಯ ಕಥೆಯೊಂದು ನಡೆದುದು. ಒಂದು ದಿನ ನಾವು
ಪರ್ಣಶಾಲೆಯಲಿ ಕುಳಿತಿರೆ, ಓರ್ವ ರಕ್ಕಸಿಯು,
ಮಾಯಾವಿ ! ಚೆಲುವಾಂತು ಬಂದೆಮ್ಮ ಬಳಿನಿಂದು,
ಕೊಂಕು ಬಯಕೆಯನೊಂದ, ತಿಳುಪಿದಳು

ಊ:— ನಗೆಯೇಕೆ ?
ಏನ ಬಯಸಿದಳು ?

ಲ:— ಮದುವೆಯ.

ಊ:— ಆದನೊಲಿದು ?
ಮರೆಯಲಾದುದೆ ಎನ್ನ ?

ಲ:— ಮರೆವನೇ ಜೀವವನು ?
ಸಾಧ್ಯಮೇ ? ವಿರಹ ಭ್ರಾಂತಿಯನುಳಿದೆ ನಿಜವು;
ಪ್ರೇಮ ಶೂನ್ಯದ ಬಗೆ ಇದಲ್ಲ.

ಊ:— ಮುಂದೇನಾಯ್ತು ?

ಲ:— ಇರ್ವರೂ ಮೆಚ್ಚುಗೆಯೆ; ವರಿಸಿರೋರ್ವರೆನುತ್ತೆ
ಅಬ್ಬರಿಸಲಾ ದನುಜೆ, ಚತುರೋಕ್ತಿಯಲಿ, ರಾಮ,
ಸತಿಯಿರುವಳೆನಗೆ, ಸವತಿಯ ಕಾಟ ಬೇಡ;
ತಮ್ಮನನು ವರಿಸು; ಪೋಗೆಂದು ಅಟ್ಟಿದನು.
ಸೇವಕನು ನಾನೆಂದು—

ಊ:— ವರಿಸಲಿಲ್ಲವೋ ನಿನ್ನ ?

ಲ:— ಅಣ್ಣ ಚೆಲುವನು, ಪ್ರಭುವು; ತಕ್ಕ ವರನವ ನಿನಗೆ,
ಪೋಗೆಂದು ತೊಲಗಿಸಿದೆ.

ಊ:— ಅಣ್ಣ ವರಿಸಿದನೋ ?

ಲ:— ಅಣ್ಣ ನೆನ್ನಯ ಬಳಿಗೆ, ನಾನವನ ಬಳಿಗೆ,
ಅಟ್ಟಿಟ್ಟಿ, ರಕ್ಕಸಿಯ ಕಾಡಿ ಆಡಿದೆವು:

ಕಡೆಗವಳು ಬೇಸತ್ತು, ಕಡೆಗಾಣಿಸುವೆ ನಿಮ್ಮ
ನೆಂದು ಪಲ್ಮಸೆದು, ಚೀರಿದಳು. ಬೆದರಿದಳು
ಅತ್ತಿಗೆಯು. ಸಾಕೀ ವಿನೋದ; ದಂಡಿಸಿ ಇವಳ
ಸೊಕ್ಕ ಮುರಿದಿಲ್ಲಿಂದ ಸಾಗಿಸೆಂದನು ರಾಮ.

ಊ:— ಏನಾಯ್ತು ಗತಿ? ಅವಳಿಗೇನಗೈದಿರಿ ನೀವು?

ಲ:— ಮೂಗರಿದು ಅಟ್ಟಿದೆನು. ಹೋಯೆಂದು ಬೊಬ್ಬಿಡುತೆ,
ಅಂಗಭಂಗಕೆ ತಕ್ಕ ಫಲ ಉಣುವಿರೆಂದವಳು ಓಡಿದಳು.

ಊ:— ಮುಂದೇನು?

ಲ:— ಆಪದಗಳೇ ಮಿಗಿಲು ನಮಗೆ!
ಸರಸವಿದು ವಿರಸದಲಿ ಪರಿಣಾಮವಾಯ್ತು.
ಒಂದು ದಿನ ಆಶ್ರಮದ ಮುಂದೆ ಪೊನ್ ಮಿಗವೊಂದು
ಸುಳಿದಾಡುತಿರೆ ಕಂಡು, ಮೋಹಿಸುತೆ ಅದನು
ತಂದೀವುದೆಂದು ಬಯಸಿದಳು, ಜನಕಾತ್ಮಜೆಯು.
ಮಾಯೆ ಇದು; ರಕ್ಕಸರು ಪೊಂಚಿಹರು ವಂಚಿಸಲು
ಚಿನ್ನದೊಡಲಿನ ಚಿಗರಿ ದೈವ ಸೃಷ್ಟಿಯೊಳಿಲ್ಲ.
ಬೇಡ ಬೇಡೆಂದೆನಿತು ಪೇಳಿದರು ಬಯಸಿದಳು.
ತೆರಳಿದನು ರಾಮ, ಹರಿಣವ ಪಿಡಿಯಲೆಂದು.
ಕಾವಲಿರಿಸಿದನೆನ್ನ.

ಊ:— ತಂದಿತ್ತನೇ ಮೃಗವ?

ಲ:— ಒಡನೆ ಬರ್ಪುದು, ಪಿಡಿಯೆ ಪೋಗೆ, ಮಿಂಚಿನ ತೆರದಿ
ಕಡುದೂರದಲಿ ಕಣ್ಗೆ ಕಾಂಬುದಾ ಮೃಗ; ಬಿಡದೆ
ಬೆನ್ನಟ್ಟಿದನು ರಾಮ. ನಡು ಹಗಲು ಬಿಸಿಲೇರಿ
ಬೇಗೆ ಮಿಗಿಲಾಯ್ತು. ಪಿಂತಿರುಗಲಿಲ್ಲಾ ರಾಮ.
ಕೇಳಿ ಬಂದುದು ನಮಗೆ ಮೊರೆಯೊಂದು ರಾಘವನ
ಪೋಲ್ಪ ಕೊರಳಲಿ, ಲಕ್ಷ್ಮಣಾ! ರಕ್ಷಿಸೆಂದು.
ಬೆಚ್ಚಿದಳು; ಕಂಗೆಟ್ಟು, ವತ್ಸ! ಪೋ; ಪೋಗೆಂದು

ಅಟ್ಟಿದಳು ವೈದೇಹಿ, ಎಷ್ಟ. ಇಬ್ಬಗೆಯ ಭಯ
ಜಿರಿದು, ನಿಲ್ಲಲು ಪೋಗಲಾಗದಿಹ ತಳಮಳವ
ಗೊಂಡುದೆನ್ನಯ ಮನವು. ಅತ್ತಿಗೆಯ ಬಲವಂತ
ಮೆನ್ನ ನೆಳದೊಯ್ದುದಲ್ಲಿಂದ.

ಊ:— ಬಳಿಕೇನು ?

ಲ:— ಕಂಡೆನಾ ಮೃಗದೊಡಲಿನಿಂದೊಗೆದ ಮಾರೀಚನೆಂಬ
ರಕ್ಕಸನ ಮೃತದೇಹವನದರ ಬಳಿಯೇ,
ಬಿಲ್ಲನೆದೆಗೇರಿಸಿದ ರಾಘವನು ಕಂಡೆನ್ನ,
ಏನನೆಸಗಿದೆ ಪ್ರಮಾದವ ? ತಮ್ಮ ! ನಡೆ ಬೇಗ;
ಏನು ಬಂದಿದೋ ಹಾನಿಯೆಂದು, ಎನ್ನೊಡಗೂಡಿ,
ತನು ಮುಂದೋ, ಮನ ಮುಂದೋ, ಎಂದು ಬಂದು ಕುಟೀರ
ಪಡೆಗೆ; ಕರೆದನು. ಜಾನಕೀ ! ದೇವೀ ! ಎಲ್ಲಿರುವೆ ?
ಬಾರೆಂದು. ಜಾನಕಿಯ ಉತ್ತರವು ಬರಲಿಲ್ಲ.

ಊ:— ಏನಾಯ್ತು ಜಾನಕಿಗೆ ?

ಲ:— ಜಾನಕಿಯೆ ಇಲ್ಲ.

ಊ:— ಇಲ್ಲವೇ ? ಏನಾದಳೆಲ್ಲಿ ಪೋದಳು ? ಪಸದಿ
ನೀಗಿದರೆ ? ಲೋಕಮಾತೆಯನು.

ಲ:— ಎದೆಗುಂದದಿರು.
ಅರಸಿದೆವು ವನವನದಿ, ತೊರೆ ತೊರೆಯ ಗಿರಿ ಗಿರಿಯ
ಬಳಿಯೆಲ್ಲ. ದೊರೆಯಲಿಲ್ಲವು ಮಾತೆ. ಪಗಲಿರುಳು
ಒಂದಾಗೆ; ಪಸಿವು ನಿದ್ದೆಗಳಣಗೆ; ತಿರುಗಿದೆವು;
ಕೊರಗಿದೆವು. ನಾಡುನಾಡುಗಳೆಲ್ಲ, ಬಳಸಿದೆವು;
ಬಳಲಿದೆವು. ಎಲ್ಲಿಯೂ ಜಾನಕಿಯ ಸುಳುವಿಲ್ಲ.

ಊ:— ಗತಿಯೇನು ? ಪಥವೇನು ?

ಲ:— ಯುದ್ಧವೇ ಗತಿಯಾಯ್ತು.

ಸಮನಿಸಿತು ಘೋರ ಯುದ್ಧವದೊಂದು.

ಊ:— ಆರೊಡನೆ ?

ಲ:— ಲಂಕೆಯೆಂಬೊಂದು ದ್ವೀಪವು. ಅರಸನಾಗಿರ್ದ.
ನಲ್ಲಿ ರಾವಣನೆಂಬ ಖಲನೋರ್ವ. ಆವನೇ
ಕದ್ದವನು ಜಾನಕಿಯು. ಅಂದು ಬಂದೆಮ್ಮಿಂದೆ
ಭಂಗವೊಂದಿದ ಶೂರ್ಪನಖಿ, ಅವನ ತಂಗಿ.

ಊ:— ಈಗಲರಿದೆನು; ಶೂರ್ಪನಖಿಗಾದ ಅಪಮಾನ
ದುರಿಯು ಸರ್ಬಿದುದು; ಈ ತೆರದಿ ತನ್ನಯ ಛಲವ
ಸಾಧಿಸಿದವಳು.

ಲ:— ಫಲವೇನಾಯ್ತು? ಜಯದೊಡನೆ
ಹರಣವಾಗಿರ್ದ ಜಾನಕಿಯು ದೊರೆದಳು ನಮಗೆ.
ತರಿದ ಮೂಗನು ಪಡೆವಳೇನವಳು?

ಊ!— ನಗೆ ಸಾಕು.
ಲಂಕೆಯನು ಕುರುಪಿಟ್ಟುದೆಂತು? ರಣದೊಳಗಾರ
ಬೆಂಬಲವು ನಿಮಗೆ? ಪಡೆ ಎಲ್ಲಿ?

ಲ:— ಕಥೆ ವಿಸ್ತಾರ
ಜಾನಕಿಯ ಶೋಧನೆಯೊಳಾಯ್ತು ನಾನಾ ಬಗೆಯ
ಜೀವಿಗಳ ಪರಿಚಯವು ಮನಕೆ ಅನುಭವವು
ಪಕ್ಷಿಯೊಂದೆಮಗೆ ಪೇಳ್ದುದು ರಾವಣನ ವಾರ್ತೆ
ಅವನಿರುವ ಗುರುತಿಸಿದ ವೀರ ಹನುಮಂತ.

ಊ:— ಆರವನು?

ಲ: — ವಾಯಿಸುತ, ನೂರು ಯೋಜನದ
ಸಾಗರವ ಹಾಯ್ದು ಸೀತಾದೇವಿ ಇರ್ದ ನೆಲೆ
ಯರಿದ ವೀರನು, ಬಂಧು, ಮಿತ್ರ, ಭಕ್ತನವ.
ಏನೆಂದೊಡದು ಸಲ್ಪುದವಗೆ. ಕಿಷ್ಕಿಂದೆಯಲಿ
ದೊರೆದನೆಮಗವನು.

ಊ:— ಆ ಪುರವಾವುದು?
ಲ:— ಮಿಗಿಲು ರಮ್ಯದ ಬೀಡು ಗಿರಿಗುಹೆಗಳಾನಾಡು.
ವಾನರರ ನೆಲೆವೀಡು. ಪಂಪಾ ಸರೋವರದ
ಮಧುವನದ ಮೈಸಿರಿಯ ಪೆಂಪೆಸೆವ ಕಿಷ್ಕಿಂಧೆ-
ಗರಸ ಸುಗ್ರೀವ. ಗೆಳೆತನವಾಯ್ತು ಅವನಲ್ಲಿ
ಅವನ ಮಂತ್ರಿಯು ವೀರಹನುಮ. ಇವರೆ ಸಹಾಯ
ಕಪಿದಳವನೊಳಗೊಂಡು, ತೆರಳಿ ಲಂಕಾಪುರಿಗೆ,
ಶರಧಿ ಸೇತುವೆ ಕಟ್ಟಿ, ಕಾಳೆಗದಿ ಅರಿಪಡೆಯ
ಬಲಮಡಿಸಿ, ರಾವಣನ ಸಿರಕೆಡಹಿ, ಅವನ
ಒಡವುಟ್ಟಿದ ವಿಭೀಷಣಗೆ, ಶರಣಾಗತಗೆ,
ಲಂಕೆಯೊಡೆತನವಿತ್ತು: ಕರೆತಂದೆವಗ್ನಿಯನು
ಪೊಕ್ಕ ಪಾವನೆಯ, ಜಾನಕಿಯ.
ಊ:— ಏನೇನು?
ಅಗ್ನಿ ಸಂಸ್ಕಾರವೇನಿದು ಲೋಕ ಪಾವನೆಗೆ?
ಲ:— ಅಹುದು ಸಂಶಯಗೊಂಡ ಪಾಮರರಿಗಾಗಿ,
ಅಣ್ಣಯ್ಯನೀ ಶಿಕ್ಷಾ ವಿಧಿಸಲೇ ಬೇಕಾಯ್ತು.
ಊ:— ಶಿಕ್ಷೆ ಜಾನಕಿಗಲ್ಲ; ಸಂಶಯಾತ್ಮರಿಗಾಯ್ತು.
ಲ:— ಆಯ್ತು ಜಗಕಾನಂದ, ಜಾನಕಿಯ ನೆವದಿಂದ
ಊ:— ಬಳಿಕೇನು?
ಲ:— ಬಂದೆವಿಲ್ಲಿಗೆ, ಮುಗಿದುದೆಮ್ಮ ಕಥೆ.
ನಿನ್ನ ಕಷ್ಟವಿದೇನು? ತಪದಿ ಬಳಲಿದೆಯಾ?
ಊ:— ಕಷ್ಟವೇನುಂಟನಿಯ? ಜೀವಭಾವಮದೆಲ್ಲ
ನೀನೆ; ಬಳಲಿದೆನಿಲ್ಲ; ವೇದನೆಯನರಿಯೆ;
ಭ್ರಮೆ ಇಲ್ಲ; ಬೇಸರವು ಇಲ್ಲ. ಧರ್ಮವ ಬಗೆದೆ
ಪ್ರಕೃತಿಯಲಿ, ವಿಶ್ವಪ್ರೇಮದಲಿ ಬೆರೆದನು ದೇವ.
ಇನಿತು ಕಾಲದ ನಿಯೋಗವು ದೀರ್ಘವಾದೊಂದು

ದಿನವಂತೆ ಕಳೆದುದಾವುದೋ ಸುಖದ ಕಲ್ಪನೆಯು
ವಿಸ್ಮೃತಿಯಲಿತ್ತು ಸುಖದುಃಖವೊಂದೇ ಸಮದಿ.
ಇನಿಯ! ರಣಕರ್ಮದಲಿ ತೊಳಲಿ ಬಳಲಿವೆ ನೀನು.
ಸಂಸ್ಕಾರ ಬಲ; ಕರ್ಮಯೋಗಿಯೆನಿಸಿದೆ ನೀನು.

ಲ:— ಧರ್ಮದೇವಿಯು ನೀನು. ಧರ್ಮಕರ್ಮಗಳ
ಸಂಯೋಗದಲಿ ಜಗದ ಜೀವನವು ಸಾಧ್ಯ.
ಶಾಂತಿ ವಿಶ್ರಾಂತಿಗಳ ತೊರೆದೆನ್ನ ಜೀವನದ
ಸಂಸ್ಕಾರಬಲ ಮಲಿನ, ಜೀವ ಬಲಿಯಿಂದೆ.
ಸಾಹಸದ ಬಾಳ್ ನಿಚ್ಚವಲ್ಲ. ಸ್ವಚ್ಛತ ಇಲ್ಲ.
ನೋವ ನೀಗುತೆ ಜೀವವನು ಕಾವ ಸದ್ವಿಜಯ
ಜೀವನದ ಸಂಸ್ಕಾರ; ಸತ್ವ; ನಿನ್ನದು ದೇವಿ!
ರಕುತ ಪಾನದ ತೋಳ ಗೆಲುವೊಂದು ಗೆಲುವೆ?
ನಿನ್ನ ಗೆಲುವೇ ಚೆಲುವು. ಶಾಂತಿ ನೀಡೆನಗೆ.
ನಿನ್ನ ನೈರ್ಮಲ್ಯದಿಂದೆನ್ನ ಮಲಿನವ ನೀಗು.
ನಿನ್ನ ಬಗೆಯೆನಗೆ ವಿಶ್ರಾಂತಿ ಮಂದಿರವು.
ಮತಿವೆರಸಿ ಹಿತನೀವ ಪ್ರೇಮನಿಧಿ ನೀನು.



# ಪರಿಚಯ

'ಭಾರತಿ' ಎಂಬುದು ಶ್ರೀಮತಿ ತಿರುಮಲೆ ರಾಜಮ್ಮನವರ ಕಾವ್ಯ ನಾಮ. ಇವರು ಸರಳರಗಳೆಯಲ್ಲಿ "ತಪಸ್ವಿನಿ" ಯೆಂಬ ರೂಪಕವನ್ನೂ ಮತ್ತು ಅನೇಕ ಕಾವ್ಯಗಳನ್ನೂ ಬರೆದಿದ್ದಾರೆ. ಕಲ್ಪನಾ ಸಾಮರ್ಥ್ಯ ಮತ್ತು ಕಾವ್ಯ ಪ್ರತಿಭೆಯನ್ನು ಅವರ ಗ್ರಂಥಗಳಲ್ಲಿ ಕಾಣಬಹುದು. ಶೈಲಿಯು ಭಾವಕ್ಕೆ ತಕ್ಕಂತೆ ಅದೆ. ಊರ್ಮಿಳಾ ಲಕ್ಷ್ಮಣರ ಸುಖ ಸಲ್ಲಾಪವನ್ನು ಇವರ 'ತಪಸ್ವಿನಿ'ಯಿಂದ ಆಯ್ದುಕೊಂಡಿದೆ.

## ಅಭ್ಯಾಸ

೧ ೧) ಲಕ್ಷ್ಮಣ ಮತ್ತು ಊರ್ಮಿಳೆ ಇವರ ವ್ಯಕ್ತಿಚಿತ್ರ ಕೊಡಿರಿ.

೨) 'ಕರ್ಮಯೋಗಿ' 'ಧರ್ಮದೇವಿ' ಈ ಹೆಸರುಗಳು ಅವರೀರ್ವರಿಗೆ ಹೇಗೆ ಸಲ್ಲುವವು?

೩) ಊರ್ಮಿಳೆ ಲಕ್ಷ್ಮಣರ ವಿರಹಜೀವನದಿಂದ ದಾಂಪತ್ಯ ಜೀವನದ ಯಾವ ಆದರ್ಶವು ಕಂಡುಬರುವುದು?

೪) ಲಕ್ಷ್ಮಣನಿಗಾದ ವಿಪಿನವಾಸದ ಅನುಭವವೇನು ?

೫) ಈ ಸಂವಾದವನ್ನು ಅಭಿನಯಿಸಿರಿ.

ಸ್ಪಷ್ಟೀಕರಿಸಿರಿ:—

೧) " ಶಿಕ್ಷೆ ಜಾನಕಿಗಲ್ಲ ಸಂಶಯಾತ್ಮರಿಗಾಯ್ತು"

೨) " ರಕುತಪಾನದ ಕೋಳಗೆಲುವೊಂದು ಗೆಲುವೆ ? "

೩) " ತರಿದ ಮೂಗನು ಪಡೆದಳೇನವಳು ? "

೪) " ನೋವ ನೀಗುತೆ ಜೀವವನು ಕಾವ ಸದ್ವಿಜಯು ಜೀವನದ ಸಂಸ್ಕಾರ "

೩ (ಕ) ಇದರಂತೆ ಬೇರೆ ಜೋಡುನುಡಿ ಕೊಡಿರಿ: ಜಪ-ತಪ.

(ಖ) ಮೇಳುನುಡಿಕೊಡಿರಿ: ಗೆಲವು, ಅಟ್ಟು, ನೊರೆ.

(ಗ) ತತ್ಸಮ ತದ್ಭವ ಹೇಳಿರಿ: ಸುಖ, ಬಿನ್ನಾಣ, ಬಿತ್ತರ, ರಕ್ಕಸ, ಮೃಗ, ಸಾಹಸ.

(ಘ) ರೂಪ ಸಿದ್ಧಿ ಹೇಳಿರಿ: ಪೆರ್ಮೆ, ಪೆಂಪು.

(ಙ) ಸಮಾಸ ಬಿಡಿಸಿ ಹೆಸರು ಹೇಳಿರಿ: ಪಲ್ಮೊಸೆ, ಮೂಗರಿದು.

೪ ಕೆಳಗಿನ ಮಾತನ್ನು ವಿಸ್ತರಿಸಿ ಬರೆಯಿರಿ.

ಸಾಹಸದ ಬಾಳ್ ನಿಚ್ಚವಲ್ಲ.

# ಗುಡಿಯಿಲ್ಲದ ಮಹಾಲಿಂಗ



ಸುಳ್ಯದ ಬಳಿಯ ಕಗ್ಗಾಡಿನಲ್ಲೊಂದು ದಿನ ಭೇಟಿಯಾದ ಮಹಾ-ಲಿಂಗನ ಕಥೆಯಿದು. ಪಯಸ್ವಿನೀ ನದಿಯ ತೀರ. ನಾವು ಕೆಲವರು ಆಲೆಟ್ಟಿಗೆ ಹೋಗುತ್ತಿದ್ದೆವು. ನದಿಯಾಚೆಗಿನ ದಟ್ಟ ಕಾಡಿನಲ್ಲಿ ಮಹಾಲಿಂಗನ ಗುಡಿಯಿದೆ. ಗುಡಿಯೀಗ-ಸುತ್ತಲಿನ ಪ್ರದೇಶದೊಂದಿಗೆ ಬೆರೆತಿದೆ. ಮಹಾಲಿಂಗನೊಬ್ಬನು, ಅರೆ ಕೆಸರು ಕೊಳಚೆಗಳಲ್ಲಿ ನಿಂತು ರೋದಿಸುತ್ತಿದ್ದಾನೆ. ಅಂತಹ ಮಹಾ ಲಿಂಗರು ನಮ್ಮ ಜಿಲ್ಲೆಯ ನೂರಾರು ಮೂಲೆಗಳಲ್ಲಿರಬಹುದು. ಎಷ್ಟೋ ಮಹಾಲಿಂಗರು, ಇದೇ ರೀತಿ ನನ್ನೊಡನೆ ಮಾತ ನಾಡಿದುದರಿಂದ, ಈ ಮಹಾಲಿಂಗನ ವಿಚಾರ ಮಾದರಿಗಾಗಿ ಬರೆಯುತ್ತಿದ್ದೇನೆ.

ನಾವು ಕೆಲವರು ನದಿಯನ್ನು ದಾಟಿದೆವು. ಕಲ್ಲು ಬಂಡೆ ಗಳ ಮೇಲೆ ಮೊಸರು ಕಡೆಯುವಂತೆ, ತನ್ನನ್ನು ತಾನು ಕಡೆದು ಕೊಂಡು ಪಯಸ್ವಿನಿ ಹರಿಯುತ್ತಿದ್ದಳು. ಪಯಸ್ವಿನಿ, ತಪಸ್ವಿನಿ ಆಹುದೋ ಎನೋ-ಕಾಡಿನೆಡೆಯಲ್ಲಿ ಅವಳ ವಾಸ. ಪಯಸ್ವಿನಿಯ ನೀರನ್ನು ಕುಡಿದೆವು. ಉಂಡ ಮನೆಗೆರಡೆಣಿಸಿ ನೀರನ್ನು ಕುಡಿದು ಅವಳ ಮೋರೆಯ ಮೇಲೆ ಉಗುಳಿ, ಮುಂದಕ್ಕೆ ಸಾಗಿದೆವು. ತುಸು ದೂರ ಸರಿದಿದ್ದೆವಷ್ಟೆ-ದರಿದ್ರದ ಮರಗಪ್ಪೆಯೊಂದು ಕಿರು ಚುತ್ತಿತ್ತು.

ನಾನು — ಎಲಾ, ಚಿರಿ ಚಿರಿ ಚೀರುವವನು ಯಾರು, ಇಷ್ಕೂಲು ಮಾಸ್ತರರ ಹಾಗೆ! ಯಾರು ಇವರ ಲೆಕ್ಚರು ಕೇಳುವವರಂತೆ!

ನನ್ನ ಜತೆಯಲ್ಲಿದ್ದ ಒಬ್ಬರು ಮಾಸ್ತರರು— (ಸಿಟ್ಟಾದರೋ ಏನೋ) ಅದು ಮರ ಕಪ್ಪೆಯಲ್ಲವೆ? — ಎಂದರು.

ನಾನು — ಕಪ್ಪೆಯೆಂದರೆ ಬ್ರಾಹ್ಮಣನಂತೆ. ನಾವು ಚಿಕ್ಕವರಿದ್ದಾಗ ನಮ್ಮವರು ಹಾಗೆ ಹೇಳುತ್ತಿದ್ದ ನೆನಪು. ಅದನ್ನು ಕೊಂದರೆ ವಿಪ್ರರನ್ನು ಕೊಂದಷ್ಟು ಪಾಪ ಎನ್ನುತ್ತಿದ್ದರು. ಮುಂಗಾರು ಮಳೆಗೆ ನಮ್ಮೂರ ಗದ್ದೆಗಳ ಅಂಚಿನಲ್ಲಿ, ಅವು ಸಾಲಾಗಿ ಕೂತು ಟ್ರ್ರಾಂಯಿಗುಟ್ಟುವದನ್ನು ನಾನು ಕಂಡವನು. ಬ್ರಾಹ್ಮಣರು, ರುದ್ರದ ದಿವಸಗಳಲ್ಲಿ ಅದೇ ರೀತಿ ವೇದದ ಋಕ್ಕು ಹೇಳಿರುವದನ್ನು ಕೇಳಿರುವೆ. ಹೀಗಿದ್ದು ಅವನ್ನು ಬ್ರಾಹ್ಮಣಜಾತಿಗೆ ಸೇರಿಸಿದ್ದು ತಪ್ಪಲ್ಲ. ಆದರೆ - ಕಪ್ಪೆಗೆ ಮರ ಏರುವ ಕೆಲಸವೇಕೆ? ಬಿಲ್ಲವರ ಕೆಲಸ ಬ್ರಾಹ್ಮಣರಿಗೇಕೆ?

ಮಾಸ್ತರರು — ಛೆ, ಅದು ಇರುವದು ಹೆಚ್ಚಾಗಿ ಮರದ ಮೇಲೆಯೇ. ಮರದಿಂದ ಮರಕ್ಕೆ ಹಾರುವದೂ ಉಂಟು.

ನಾನು — ಹಾಂ, ಈ ಜಾತಿಯ ಕಪ್ಪೆಗಳನ್ನು ಕಂಡೇ ಬ್ರಾಹ್ಮಣನನ್ನು 'ಹಾರುವ' ಎಂದದ್ದು. ಇರಲಿ ನೋಡಿಬಿಡುವ— ಹಾರುವನ ರೂಪವನ್ನಾದರೂ.

ಮಾಸ್ತರರು —ಪಡ್ಡ ಆಯಿತು, ಕಪ್ಪೆ ನೋಡಲಿಕ್ಕೆ ನಿಂತರೆ, ಹೊತ್ತು ಮುಳುಗಿತು ಆಲಿಟ್ಟೆ ಮುಟ್ಟುವಾಗ.

ನಾನು — ಅಲ್ಲ, ಆ ಕಪ್ಪೆ ಏನು ಮಂತ್ರ ಹೇಳುತ್ತಿದೆ— ರುದ್ರದ ಬ್ರಾಹ್ಮಣರ ಹಾಗೆ?

ಹೀಗೆಂದು ಭಾರೀ ಪತ್ತೇದಾರನಂತೆ, ಅದರ ನಿನಾದವು ಹೊರಟ ಸ್ಥಳಕ್ಕೆ ಬೀಜಯಂಗೈದೆ. ನೋಡುವಲ್ಲಿ ಸದರಿ ಕಪ್ಪೆಯಿತ್ತು. ಒಂದು ಕಲ್ಲಿನ ಮೇಲೆ ಕೂತು ಅದು ಟ್ರ್ರಾಂಯಿ ಗುಡುತ್ತಿತ್ತು.

ನಾನು— ಬ್ರಾಹ್ಮಣರು ಶಿವಲಿಂಗದ ಮುಂದಕ್ಕೆ ಕುಳಿತು ರುದ್ರಹೇಳಿದರೆ, ಇದು ಲಿಂಗದ ತಲೆಯ ಮೇಲೆಯೇ ಕುಳಿತು........

ಕಪ್ಪೆಗೆ ಅವಮಾನವಾಯಿತೋ ಏನೋ— ಅದು ಅಲ್ಲಿಂದ ಓಡಿತು.

ಮಾಸ್ತರರು— ಅಲ್ಲ, ಅದು ನಿಜಕ್ಕೂ ಶಿವಲಿಂಗವೆ? ಈ ಗುಡಿಯ ಹೆಸರೇನು? ನೋಡಿ ಅದರ ಪಾಣಿಪೀಠ ಗುಡಿ ಕಲ್ಲು ಎಲ್ಲಾ ಚೆದರಿಬಿದ್ದದ್ದು...........

ಅಲ್ಲಿ ಹಾಳು ಗುಡಿಯೊಂದರ ಭಗ್ನಾವಶೇಷಗಳು ಕಾಣಿಸುತ್ತಿದ್ದವು. ಮಹಾಲಿಂಗನು ಕುಳಿತಿದ್ದಾನೆ; ಗುಡಿಗೆ ಮಾಡು ಗೋಡೆಗಳೆರಡೂ ಇದ್ದಿಲ್ಲ. ಅದರಿಂದ ನನ್ನ ಮನಸ್ಸಿನಲ್ಲಿ ಏನೇನೋ ವಿಚಾರಗಳು ಸುಳಿದವು

ನಾನು— ಅಪ್ಪಾ, ಲಿಂಗಾ, ಯಾಕೆ ಈ ಜನರು ನಿನ್ನನ್ನು ಅಟ್ಟಕ್ಕೇರಿಸಿ, ಮಹಾಲಿಂಗನನ್ನಾಗಿ ಮಾಡಬೇಕು? ಈಗ ಹೀಗೆ ನಿನ್ನ ಕೈಬಿಟ್ಟು...........

ಮಹಾಲಿಂಗ—ನೀನಾರಯ್ಯಾ ಹೀಗೆ ಬಲು ಕರುಣೆಯಿಂದ....

ನಾನು-ನಾನೆಂದರೆ ನಿನ್ನ ಹೆಸರಿನವನೇ: ಶಿವರಾಮ ಅಂತ "ಶಿವ"ನ ಸಿಟ್ಟು ಹೆಚ್ಚಾದೀತು ಎಂಬುದರಿಂದ ಹೆಚ್ಚು "ರಾಮ" ನನ್ನ ಜೊತೆಗೆ ದೋಸ್ತಿ ಮಾಡಿಸಿ ಬಿಟ್ಟರು. ಅದು ಬಿಡು- ನಿನ್ನ ಅವಸ್ಥೆಯೇನು? ನಮ್ಮೂರಲ್ಲಿ ಒಬ್ಬ ಮಹಾಲಿಂಗನಿದ್ದಾನೆ. ಏನು ಅವನ ಠೀವಿ! ಅವನು ಆಳೆತ್ತರದ ಆಸಾಮಿ. ದಿನಕ್ಕೆ ರಡು ಸಾರಿ ಅಭಿಷೇಕ (ಬರಿ ನೀರಲ್ಲಪ್ಪ); ಮಳೆದಿನವೂ ಸಹ ಗೋಕರ್ಣದಲ್ಲಿದ್ದಾನೆ. ಒಬ್ಬ; ಅವನ ವೈಭವವಂತೂ . ಹೇಳ ತೀರದು.

ಮಹಾ—ಅದೇನು ವೈಭವವೊ ಅವರದ್ದು! ಅವರಿಗಿಂತ ನನ್ನ ಹಾಗೆ ಇರುವುದು ಎಷ್ಟೋ ಲೇಸು.

ನಾನು—ಬಾಲಾ ಹೋದ ಸರಿ ಕಥೆಯಂತೆ.

ಮಹಾ— ಅಲ್ಲವಯ್ಯ, ನಿನಗೆ ನನ್ನ ಹೆಸರಿದೆ ಎಂದು ಹೇಳುತ್ತೇನೆ. ಪೀಠದ ಮೇಲೆ ಕೂತು ನಾನು ಯಾವ ಅನ್ಯಾಯಕ್ಕಲ್ಲ ಸಾಕ್ಷಿಯಾಗಬೇಕಿತ್ತು ಬಲ್ಲೆಯಾ ?

ನಾನು—ಅನ್ಯಾಯವೆಲ್ಲಿ! ಜನರು ತಮ್ಮಲ್ಲಿ ಭಕ್ತಿ ಇರಲಿ ಇಲ್ಲದಿರಲಿ ನಿನಗಾಗಿ ಏಕಾದಶ ರುದ್ರ ಮಾಡುತ್ತಾರೆ. ಅರ್ಥ ಅವರಿಗೇ ತಿಳಿಯದು. ಅರ್ಥ ಮಾಡಬಯಸುವುದೂ ಇಲ್ಲ. ನಮ್ಮಲ್ಲೇನಾದರೂ ಮಹಾಸಭೆಯಾದರೆ ಅಧ್ಯಕ್ಷ ಅನ್ನುವ ಆಸಾಮಿ ಗದ್ದುಗೆ ಏರಿ ಕುಳಿತರೆ, ನಾಲ್ಕು ನಾಲ್ಕು ತಾಸು ಏಳುವುದುಂಟೇ? ನಾಲಗೆ ಚಾಪಲ್ಯವಿರುವ ಆಸಾಮಿಗಳು ಕಿರುಚಿದ್ದೆಲ್ಲಾ ಚನ್ನಾಗಿದೆ ಎಂದು ಕೇಳಿ ಅನುಭವಿಸಬೇಕು. ಇಲ್ಲಿ ಹಾಗೆ ಯಾರೂ ಒದರುವುದಿಲ್ಲವಲ್ಲ. ಒದರುವ ಭಾಷೆಯೂ ಸಂಸ್ಕೃತ-ಅದು ನಿನಗೆ ತಿಳಿದಿರಬೇಕು. ನಿತ್ಯ ನಿನ್ನ ಸ್ತುತಿ.

ಮಹಾ—ಬೆಂಕಿ ಬಿತ್ತು ಆ ಸ್ತುತಿಗೆ! ಬಾಯಿಪಾಠ ಮಾಡಿ ಮೇಲಿಂದಮೇಲೆ ಅವನ್ನು ಹೇಳುತ್ತಾ ಇದ್ದರೆ ಬೇಸರ ಬಾರದೇ ಕಿವಿ ಒಡೆದು ಹೋಗಲಿ ಅನಿಸುತ್ತದೆ.

ನಾನು—ಅನಿಸುತ್ತದೆ. ಅನಿಸಿದರೆ ನಷ್ಟವೇನು? ಪೂಜೆ, ಹೂವು, ಹಾರ, ಗಂಧ, ಇತ್ಯಾದಿ ಎಲ್ಲ ಬಹುವಾಗಿ ಸಿಗುವಾಗ

ಮಹಾ—ಅಯ್ಯೋ ಬೇಡಪ್ಪ ಆ ವಿಷಯ; ಬಿಡು. ಕರುಳು ಕತ್ತರಿಸುತ್ತದೆ ನೆನೆದರೆ.

ನಾನು—ಕರುಳನ್ನು ಕಿತ್ತು ಹಾಕಿಬಿಡು. ಕಲ್ಮಲ ಹೊರುವ ಕರುಳಿದ್ದರೆ ಹೊಟ್ಟೆಗೆ ಶೂಲೆಯಲ್ಲವೇ?

ಮಹಾ—ಮಾತು ಸರಿಯೇ. ಆದರೆ ಅವರ ವೈಭವ, ನನ್ನ ಹೀನಾವಸ್ಥೆಗಳನ್ನು ಕುರಿತು ಹೇಳುತ್ತೀಯಲ್ಲ!

ನಾನು—ಗೋಕರ್ಣೇಶ್ವರನ ವೈಭವ ಎಂದು ಹೇಳಿದೆ.

ಮಹಾ—ನಿಜ ಅದೇ ನನಗೆ ಬೇಡ ಎಂದೆ. ನೂರು ಜಪ ಮಾಡುತ್ತೇನೆ ಎಂದು ಪೂಜಾರಿ ನನ್ನೆದುರಿಗೆ ಮಾತು ಕೊಡು

ತ್ತಾನೆ. ಹತ್ತು ಸಹ ಜಪವಿಲ್ಲ. ನೈವೇದ್ಯ — ಅದು ಪಾವು ಅಕ್ಕಿ ಕೊಂಡು, ಎರಡು ಪಾವು ನೆನಸಿ, ಒಂದು ಪಾವು ತೋರಿಸಿ ಮನೆಗೆ ಒಯ್ಯುತ್ತಾನೆ. ಅಯ್ಯೋ—ಅಯ್ಯೋ ಮಹಾಲಿಂಗ ಭಟ್ಟನೆಂದೇ ಹೆಸರಿನ ಅರ್ಚಕನಿದ್ದ ನನ್ನ ಮುಂದಿನ ನಂದಾದೀಪವನ್ನು ರಾತ್ರಿ ಗುಡಿ ಮುಟ್ಟುವಾಗ ತಾನೇ ನಂದಿಸಿ ಬೆಳಗ್ಗೆ ಬಂದಾಗ ತಿರುಗಿ ಹಚ್ಚಿಬಿಡುತ್ತಿದ್ದ.

ನಾನು — ಪೂಜಾರಿಯ ಮಾತು ಬಿಡು. ಅವನಿಗೂ ಪೂಜೆಮಾಡಿ ಬೇಸರ ಬರಲಾರದೆ ? ಸರಕಾರಿ ಗುಮಾಸ್ತಿಕೆಯಂತೆ ಅವನು ಗೀಚಿದ್ದೇ ಗೀಚುವುದಲ್ಲವೇ ? ಆದರೆ ಬರುವ ಭಕ್ತರಿಗಾದರೂ ನಿನ್ನ ಮೇಲೆ ಪ್ರೀತಿ ಇತ್ತೋ ಇಲ್ಲವೋ ?

ಮಹಾ—ಎಲ್ಲಾ ಪ್ರೀತಿ ಇದ್ದವರೇ !

ನಾನು—ಹಾಗೆ ಹೇಳು ಮತ್ತೆ .

ಮಹಾ—ಹೇಳುವುದೇನು ನನ್ನ ಗೋಳನ್ನು? ಬಂದ ಬಂದವರು ನನ್ನಹತ್ತರ ಫಿರ್ಯಾದಿ ವಿನಾ ಮತ್ತೇನಿಲ್ಲ. ಒಬ್ಬಾಕೆ ಬಂದಳು ತನಗೆ ಮಕ್ಕಳಿಲ್ಲ ಎಂದು ಅತ್ತಳು. ಇನ್ನೊಬ್ಬನಿಗೆ ಸಾಲವಿದೆಯಂತೆ, ತೀರಿಸಯ್ಯಾ ಎಂದು ಅತ್ತ. ಮೂರನೆಯವನು ಎಲ್ಲಾ ಬಿಟ್ಟು—ತನ್ನ ಕೋಣಕ್ಕೆ ಕಂಬಳದಲ್ಲಿ ಗೆಲುವಾಗಲಿ ಎಂದು ಕೇಳಿಕೊಂಡ.

ನಾನು—ಕೋಣನೇ, ನಂದಿಯೋ ?

ಮಹಾ—ನನ್ನ ನಂದಿಯೋ? ನೋಡಲ್ಲಿ ಎಂಟು ಚೂರಾಗಿ ಬಿದ್ದಿದೆ.

ನಾನು—ಯಾರು? ಘಜನಿ ಮಹಮ್ಮದ ಬಂದಿದ್ದನೇ ಇಲ್ಲಿಗೆ!

ಮಹಾ—ಘಜನಿ ಯಾಕೆ? ಆ ಮಹಾಲಿಂಗಭಟ್ಟನ ತಮ್ಮನೊಬ್ಬನಿದ್ದ-ಇದು ಅವನ ಕೆಲಸ. ಎತ್ತಿ ಕಸರತ್ತು ಮಾಡಿ ನಂದಿಯನ್ನು ಕೆಡಹಿ ಚೂರು ಮಾಡಿದ. ಊರಲ್ಲಿ ಬೊಬ್ಬೆ ಬಿತ್ತು. ನಂದಿ ಚೂರಾಯಿತು, ಊರು ಸುಡುತ್ತದೆ-ಎಂದು. ಭಟ್ಟನ

ತಮ್ಮನ ಮೇಲೆ ಸಂಶಯ ಬಂದಿತು. ಅವನೇನು ಧೀರ—ನನ್ನ ಮುಂದೆಯೇ ಆಣೆ ಮಾಡಿ ಹೇಳಿಬಿಟ್ಟ. 'ನಾನು ಆ ದಿನ ಗುಡಿ ಗೇನೇ ಬಂದವನಲ್ಲ' ಎಂದು.

ನಾನು—ನಂದಿಯ ವಿಚಾರ ಹಾಗೇನು? ಇನ್ನು ನಿನ್ನ ಪಾರ್ವತಿ, ಮಗ ಗಣೇಶ, ಶೃಂಗಿ ಭೃಂಗಿ ಮೊದಲಾದ ಪರಿವಾರಗಳೆಲ್ಲ ಎಲ್ಲಿ?

ಮಹಾ—ಎಂಥವನು ನೀನು! ನನ್ನ ಅವಸ್ಥೆ ಹೀಗಿರುವಾಗ ಬಂಗಾರದ ಪಾರ್ವತಿಯನ್ನು................

ನಾನು—ಪಾರ್ವತಿ ಯೆಂಬವಳು ಚಿನ್ನಕ್ಕೆ ಸಮ..

ಮಹಾ—ಅವಳನ್ನು ಮಾಡಿದ್ದು ಚಿನ್ನದಿಂದ ಎಂದೆ. ಇನ್ನೊಬ್ಬ ಪೂಜಾರಿ, ಇಲ್ಲಿನ ಮಾಲೆಯವರು ಜೊತೆ ಸೇರಿ ನನ್ನ ಪಾರ್ವತಿಯನ್ನು ಎತ್ತಿಕೊಂಡು ಹೋಗಿ, ರಾತ್ರಿಯಲ್ಲಿಯೇ ಕರಗಿಸಿಬಿಟ್ಟರು!

ನಾನು—ಪತ್ನಿಯನ್ನಗಲಿದ ಮೇಲೆ ನಿನ್ನ ಗತಿ?

ಮಹಾ—ಅಗಲುವುದೆಲ್ಲಿ ಬಂತು? ಮುನ್ನೂರು ವರ್ಷದ ಕೆಳಗೆ, ನನ್ನನ್ನು ಸ್ಥಾಪನೆ ಮಾಡಿದಾಗ ಆ ವೈಭವವೇನು!

ನಾನು— ಹೋಗಲಿ ಬಿಡು. ನಿನ್ನ ವಿನಾಯಕ ?

ಮಹಾ— ಓಹೋ, ಮಗ ವಿನಾಯಕನೆ ? ಆಗ ಅವನಿಗೆ ಸಾವಿರ ತೆಂಗಿನ ಕಾಯಿಗಳ ಮೂಡುಗಣಪತಿ ಹರಕೆ ಬರುತ್ತಿತ್ತು.

ನಾನು— ಈ ಕೊಬ್ಬರಿಯನ್ನೆಲ್ಲ ತಿನ್ನಲು ನಿನ್ನ ಮಗ ನಿಗೆ ಹೇಗೆ ಸಾಧ್ಯವಾದೀತು ? ಹಿಂದೆ ನಿನ್ನ ಕೈಲಾಸದಲ್ಲೂ ತೆಂಗಿನ ತೋಟ ವಿದ್ದಿತೇ ?

ಮಹಾ — ಮಗ ಕೊಬ್ಬರಿ ಎಲ್ಲಿ ತಿನ್ನುತ್ತಿದ್ದ ? ಕೊಬ್ಬರಿ ಅವರಿಗೆ ? 'ರಪ್', ಎಂದು ಹೊಸ್ತಲಿಗೆ ಕಾಯಿ ಒಡೆದು ಗದ್ದಲ ಮಾಡುತಿದ್ದರು. ಆಮೇಲೆ ಚಿಪ್ಪನ್ನು ಅಲ್ಲಿಯೇ ಎಸೆಯುವರು—

ಇನ್ನೊಬ್ಬನ ಕಾಲಿಗೆ ತಾಗಿ ರಕ್ತ ಸುರಿವ ಮೋಳೆಯೋ ಅದನ್ನು ತೆಗೆಯಬೇಕು.

ನಾನು — ಈಗ ತಾಜಾ ಕಲಂ ನಿನ್ನನ್ನು ಇಲ್ಲಿ ಸ್ಥಾಪಿಸಿ ಎಷ್ಟು ವರುಷಗಳಾದವು ?

ಮಹಾ — ಮೂನ್ನೂರಾಯಿತೆಂದೆನೆಲ್ಲ. ಅಂದರೆ ಈಗ ನನಗೆ ಪೂಜೆ ನಿಂತೇ ಅರುವತ್ತಾಯಿತು.

ನಾನು— ಮುನ್ನೂರು ವರುಷ! ಅಂದರೆ ಇತ್ತಿಗೆ ಬ್ರಿಟಿಷರು ಬಂದಾಗಲೇ ಬಂದೆ; ಅಂದರೆ ಆದರೇನು ನಿನ್ನನ್ನು ತರಲಿಲ್ಲವಷ್ಟೆ ? ಆದರೆ ನಮ್ಮೂರಲ್ಲಿ ಒಬ್ಬ ಮಹಾಲಿಂಗನಿದ್ದಾನೆ. ಆದ ನನ್ನು ಪಾಂಡವರು ತಂದು ಇರಿಸಿದರಂತೆ.

ಮಹಾ — ನನ್ನ ವಿಷಯದಲ್ಲೂ ಹಾಗೇ ಕಥೆಯುಂಟು. ತಮ್ಮ ಪಾಪವೆಲ್ಲ ಪಾಂಡವರ ತಲೆಯ ಮೇಲೆ ಬೀಳಲಿ ಎಂದು ತಿಳಿದರು.

ನಾನು— ಇರಲಿ, ನಿನಗೆ ಉಂಬಳಿ —ಗಿಂಬಳಿ ಇದ್ದಿರಲಿಲ್ಲವೆ ?

ಮಹಾ— ಇತ್ತು. ಒಂದು ಹತ್ತು ವರುಷ ಭಾರಿ ಉತ್ಸವ, ಪೂಜೆ, ಎಲ್ಲವೂ ಆದವು. 'ದೇವರೆಂದರೆ ಮುಳಿಯೂರ ಮಹಾಲಿಂಗ' ಎನಿಸಿಕೊಂಡೆ. ಕೊನೆಗೆ ಉಂಬಳಿಗಾಗಿ ನಾಲ್ಕು ಸಾರೆ ಕೈಕೈ ಆಯಿತು ನನ್ನ ಸನ್ನಿಧಿಯಲ್ಲಿ........ಆನಂತರ ಉಂಬಳಿಯನ್ನೆಲ್ಲಾ ತಿಂದರು, ನಾನು ಮಾತ್ರ ಉಳಿದೆ.

ನಾನು—ಪೂಜೆ ಗೀಜೆ...............

ಮಹಾ—ಯತ್ರ ತಸದೀಕು ತತ್ರ ಭಕ್ತಿ!

ನಾನು.—ಹೋಗಲಿ, ಬರಿಯ ಗುಡಿಯನ್ನಾದರೂ ಬಿಡಬಹುದಿತ್ತಲ್ಲವೇ?

ಮಹಾ ಪೂಜೆ ಹೋಯಿತು, ಮಾಡಿನ ಹುಲ್ಲೂ ಕೊಳೆಯಿತು. ಬಾವಲಿಗಳು ಸಹ ನಾಚಿಕೊಂಡು ಇಲ್ಲಿಂದ ಹೊರಟವು

ಒಂದೊಂದೇ ಮರ ಹೋಪುಗಳು ಕೊಳೆತವು. ಈಗ ನನ್ನ ಗುಡಿ ಕಲ್ಲುಗಳು ಯಾರಾರ ಮನೆಯ ಬಚ್ಚಲು, ಮೆಟ್ಟಲುಗಳನ್ನು ಅಲಂಕರಿಸುತ್ತಿರಬೇಕು.

ನಾನು—ಗಂಧವಿಲ್ಲ, ಅಭಿಷೇಕವಿಲ್ಲ, ಗುಡಿಯಿಲ್ಲ, ಗೋಪುರವಿಲ್ಲ................

ಮಹಾ—ಎಲ್ಲಾ ಇವೆ. ಗಂಧ ಹೇಲಿಂದ; ಅಭಿಷೇಕ ಅಪ್ರೂರ್ವಕ್ಕೆ ಈ ಹಾದಿಯಾಗಿ ಸಾಗುವ ನಾಯಿಗಳಿಂದ; ಗೋಪುರ ನೀಲವಾದು ಇಲ್ಲ-ನಾನು ಮೂರನೆಯ ಕಣ್ಣು ತೆರೆಯುವ ಹೋಗವಾಯಿತು.

ನಾನು—ಅದು ಅಷ್ಟೆ! ಈಗ ನೋಡು ಬಬ್ಬರ್ಯ, ಪಂಜುರ್ಲಿ, ಕಲ್ಲುರ್ಟಿ, ಇವಕ್ಕೆಲ್ಲ ನೇಮ ತಪ್ಪುವುದಿದೆಯೇ? ನೀನು ಗಾಂಧಿ ಪಾರ್ಟಿ ಸೇರಿದೆ. ಜಬರ್‌ದಸ್ತಿಯಿಲ್ಲದೆ ಯಾರೂ ದೇವರನ್ನು ಕೇಳುವುದಿಲ್ಲ. ನಿನ್ನಣ್ಣ ಗುಜರಾತಿನ ಸೋಮನಾಥನು ಮರ್ಯಾದೆ ಕಳೆದುಕೊಂಡಿಲ್ಲವೆ? ನಾನು ಅನ್ನುತ್ತೇನೆ—ನೀವು 'ದೇವರು' ಎಂಬ ಬಾಬುಗಳು ಹೀಗೆ ಪೆಚ್ಚಾಗಿರಕೂಡದು. ಹಾಲು, ಉಂಡ್ಲಕ್ಕು, ಕಡಬು, ಪಾಯಸ ಇವನ್ನು ವರ್ಜ್ಯಮಾಡಿರಿ. ಇನ್ನು ಬ್ರಾಂಬ್ರ ಗಿಲೀಟು, ರುದ್ರ ಅನ್ನುತ್ತಾರಲ್ಲ, ಮಕ್ಕಳು ಮಗ್ಗಿ ಅಂದಹಾಗೆ—ಪಟ ಪಟ ಸುರಿಯುವ ಲಿಕ್ಕು ಇವೆಲ್ಲಕ್ಕೆ ವಶರಾಗಬಾರದು.

ಮಹಾ—ಮತ್ತೇನು ಮಾಡಲಿ?

ನಾನು—ಪ್ರಳಯಕಾಲದ ಮನುಷ್ಯ ನೀನಲ್ಲವೇ!

ಮಹಾ—ಹಣೆಗಣ್ಣು ತರೆಯುವುದೇ?

ನಾನು—ಹಷ್ಟ ಆಯಿತು. ಎಲ್ಲಾ ಸುಟ್ಟತೆಂದರೆ ಮತ್ತೇನು ಉಳಿಯುವುದು? ನಮ್ಮ ಸುಬ್ರಾಯ ಶೆಟ್ಟರಹಾಗೆ ಆಸ್ತಿ ಧ್ವಂಸ ಮಾಡಿದರೆ ನಾಳೆ ಏಕಾದಶಿ. ಸುಡಬಾರದು—ಸುಟ್ಟಹಾಗೆ ಆಗಬೇಕು. ಪೂಜಾರಿ ಬಂದರೆ—"ಮೂಗು ಕೊಯ್ದು ಕೊಡು

ಎನ್ನು. ಮಕ್ಕಳನ್ನು ಕೇಳಲಿಕ್ಕೆ ಬಂದರೋ— "ಹೆಚ್ಚ್ಯಾದವರಿಂದ ಕಡ ತಕ್ಕೊಳ್ಳಿ" ಎನ್ನು. ತೆಂಗಿನಕಾಯಿ ಕಡಲೆಬೇಳೆ ತಂದರೆ "ಕುದುರೆಗೆ ಹಾಕಿ" ಎನ್ನು. "ನನಗೆ ಬಲಿ ಬೇಕು! ನಿಮ್ಮಂತಹ ತಲೆ! ಮಿದುಳಿಲ್ಲದ ತಲೆಗಳು ಬೇಕೆ"ಂದು ಘರ್ಜಿಸು.

ಮಹಾ—ಯಾತಾದರೂ ಆ ಶರ್ತದ ಮೇಲೆ ಸನ್ನ ಬಳಿಗೆ ಬಂದಾರೆಯೋ? ನನಗೆ ಗುಡಿಯನ್ನು ತಿರುಗಿ ಕಟ್ಟಿಸಿ ಕೊಟ್ಟಾರೆಯೋ?

ನಾನು—ಎಲಾ ಅಷ್ಟು ಗೊತ್ತಾಗದೆ? ಸ್ವಸ್ಥ ಊರಿಂದೂರು ತಿರುಗಬಾರದೇ ನನ್ನ ಹಾಗೆ. ಗುಡಿ ಕಟ್ಟಿಕೊಡುತ್ತಾರೆ ಎಂದು ಗುಂಡು ಕಲ್ಲಾಗಿ ಬಿದ್ದೇ ನಿನ್ನ ಅವಸ್ಥೆ ಹೀಗಾಯಿತು. ಹೊರಡು ಸರ್ಕಸಿಗೆ. ನಿನ್ನನ್ನು ಜನರು ನೋಡಬೇಕೆನ್ನುತ್ತಾರೋ-ಬರಲಿ ನಿನ್ನ ಹಿಂದೆ. ಇಲ್ಲಲ್ಲೇ ಬಿದ್ದಿದ್ದರೆ ಯಾರಿಗಾದರೂ ಮರ್ಯಾದೆ ದೊರಕೀತೆ ?

ಅಷ್ಟನ್ನು ನುಡಿದೆ. ಮಹಾಲಿಂಗನು ಮತ್ತೆ ಮಾತನಾಡಲಿಲ್ಲ. ನಾನು ಸಿಟ್ಟಾಗಿ ಹೊರಟೆ! ಆ ದಿನ ಸಂಜೆ ಮರಳಿ ಬರುವಾಗ ಮಹಾಲಿಂಗನ ತಲೆಯಮೇಲೆ ಕುಳಿತು, ಹಿಂದಿನ ದಿನದ 'ಹಾರುವ' ತಿರುಗಿ ಮಂತ್ರ ಹೇಳುತ್ತಿದ್ದ.

ಮುಂದಿನ ವರುಷ ಅದೇ ತಾವಿನಲ್ಲಿ ಒಂದು ಸ್ಕೌಟ ಕ್ಯಾಂಪ್ ಆಯಿತು. ಆ ದಿನ ಮಹಾಂಗನನ್ನು ಹಿಡಿದು, ಪಯಸ್ವಿನಿ ಕಲ್ಲಿನಮೇಲೆ ಉರುಳಿಸಿ, ಅವನ ಜಂಬಲದಿಂದ ಚಕ್ಕಿ ಪ್ರತಿಷ್ಠೆ ಮಾಡಿದರು.

ಆಶ್ಚರ್ಯವೆಲ್ಲಿ? ನಿಂತಲ್ಲೇ ನಿಂತರೆ ದೇವರಿಗೂ ಮರ್ಯಾದೆ ಇಲ್ಲ. ಸಂಚಾರಿ ಯುಗಕ್ಕೆ ಸರ್ಕೀಟಿನ ದೇವರು ಬೇಡವೇ?



# ಪರಿಚಯ.

ಈ ವ್ಯಂಗ್ಯ ವಿನೋದಮಯ ಪ್ರಬಂಧವನ್ನು ದಕ್ಷಿಣ ಕನ್ನಡದ ಪುತ್ತೂರಿನ ಶ್ರೀ. ಶಿವರಾಮ ಕಾರಂತರು ಬರೆದಿದ್ದಾರೆ. ವಿಡಂಬನಾತ್ಮಕ ಪ್ರಬಂಧಗಳನ್ನು ಬರೆಯುವದರಲ್ಲಿ ಇವರದು ಎತ್ತಿದ ಕೈ. ಸಾಹಿತ್ಯ ಮತ್ತು ಲಲಿತ ಕಲೆಗಳಲ್ಲಿ ಇವರು ತುಂಬಾ ಹೆಸರುಗಳಿಸಿದ್ದಾರೆ. ನಾಟ್ಯ ಪ್ರಪಂಚದಲ್ಲಿ ಅನೇಕ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದಾರೆ ಭಾರತೀಯ ನೃತ್ಯ ಕಲೆಯನ್ನು ಅಭ್ಯಸಿಸಿ ನೃತ್ಯ ನಾಟಕಗಳನ್ನೂ ರಂಗಭೂಮಿಗೆ ತಂದಿದ್ದಾರೆ. ವಿಚಾರ ಪ್ರಚೋದನೆಯು ಸಾಹಿತ್ಯದಲ್ಲಿ ಇವರ ವೈಶಿಷ್ಟ್ಯ. ಮರಳಿ ಮಣ್ಣಿಗೆ ಬೆಟ್ಟದಜೀವ, ಹೆತ್ತಳಾತಾಯಿ ಎಂಬ ಕಾದಂಬರಿಗಳೂ, ಗರ್ಭಗುಡಿ, ನವೀನ ನಾಟಕಗಳು ಮೊದಲಾದ ನಾಟಕಗಳೂ, ಮೈಲಿಕಲ್ಲಿನೊಡನೆ ಮಾತುಕತೆಗಳು ಮುಂತಾದ ವಿಡಂಬನಾತ್ಮಕ ಬರಹಗಳೂ ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದಿವೆ. ಪುತ್ತೂರಿನಲ್ಲಿ ಬಾಲವನವನ್ನು ನಿರ್ಮಿಸಿ ಬಾಲ ಪ್ರಪಂಚವೆಂಬ ವಿಶ್ವಕೋಶವನ್ನು ಪ್ರಸಿದ್ಧಿಸಿದ್ದಾರೆ- ಇವರು ಸಿದ್ಧಪಡಿಸಿದ ಶಬ್ದಕೋಶವೂ ಕನ್ನಡದ ಅಭ್ಯಾಸಿಗಳಿಗೆ ಅನುಕೂಲವಾಗಿದೆ. ಹೀಗೆ ಕನ್ನಡಕ್ಕೆ ವೈವಿಧ್ಯಪೂರ್ಣವಾದ ಸಾಹಿತ್ಯವನ್ನು ಒದಗಿಸುವದರಲ್ಲಿ ಇವರ ಜೊತೆಗೆ ನಿಲ್ಲುವವರು ಇಲ್ಲವೆಂದರೂ ಸಲ್ಲುವದು.

## ಅಭ್ಯಾಸ

೧ ಇದೊಂದು ವಿಡಂಬನೆಯ ರೀತಿಯ ಪ್ರಬಂಧವು. ಶ್ರೀ ಕಾರಂತರ "ಮೈಲಿಕಲ್ಲಿನೊಡನೆ ಮಾತುಕತೆಗಳು ಎಂಬ ಪುಸ್ತಕದಲ್ಲಿ ಇಂಥ ಹತ್ತಾರು ಪ್ರಬಂಧಗಳಿವೆ. ಅವುಗಳನ್ನು ಓದಿರಿ.

೨ ಸಮಾಜದಲ್ಲಿಯ ಕೆಲ ಕುಂದು ಕೊರತೆಗಳನ್ನು ನಿಷ್ಠುರತೆಯಿಂದ ಎತ್ತಿ ತೋರಿಸುವ ಮತ್ತು ಬಯಲಿಗೆಳೆಯುವ ಪರಿಣಾಮಕರವಾದ ವಿಡಂಬನೆಯ ರೀತಿಯು ಸಾಹಿತ್ಯದ ಒಂದು ಮುಖ್ಯ ಅಂಗವಾಗಿದೆ. ಈ ರೀತಿಯಿಂದಜನತೆಯ ಮೇಲೆ ಇಷ್ಟವಾದ ಪರಿಣಾಮವಾಗುವುದಲ್ಲವೆ ?

೩ ಈ ಪಾಠವನ್ನು ಶ್ರೀ ಜಾಗೀರದಾರರ "ಜಾಣತನದ ಪ್ರದರ್ಶನದೊಂದಿಗೆ ಹೋಲಿಸಿ ವಿಷಯ, ವಿನೋದದರೀತಿ ಮತ್ತು ಜನರ ಮನಸ್ಸಿನ ಮೇಲಾಗುವ ಪರಿಣಾಮ ಈ ಅಂಶಗಳಲ್ಲಿ ಕಂಡು ಬರುವ ಸಾಮ್ಯ ವೈಷಮ್ಯಗಳನ್ನು ತೋರಿಸಿರಿ.

೪ ಮಹಾಲಿಂಗನ ಕೀಳ್ದೆಸೆಯನ್ನು ಲೇಖಕರು ಯಾವ ಯಾವ ಬಗೆಯಲ್ಲಿ ತೋರಿಸಿದ್ದಾರೆ. ಮತ್ತು ಹಾಗೆ ತೋರಿಸುವ ಉದ್ದೇಶವೇನು ?

೫ ಮಹಾಲಿಂಗನ ಕೀಳ್ದೆಸೆಗೆ ಯಾರು ಯಾರು ಹೇಗೆ ಹೊಣೆಗಾರರಿದ್ದಾರೆ ?

೬ ಮಹಾಲಿಂಗ ಶಿವರಾಮ ಮತ್ತು ಹಾರುವ ಈ ಶಬ್ದಗಳಲ್ಲಿ ಅಡಕವಾಗಿರುವ ವಿಡಂಬನೆಯನ್ನು ಸ್ಪಷ್ಟಪಡಿಸಿರಿ. ಇಂಥ ಬೇರೆ ಎರಡು ಮೂರು ಶಬ್ದಗಳನ್ನು ಹೇಳಿರಿ.

೭ ಶ್ರೀ ಕಾರಂತರು ನಮ್ಮ ಸಮಾಜದಲ್ಲಿಯ ಯಾವ ಕುಂದುಗಳನ್ನು ವಿಶೇಷವಾಗಿ ಬೈಲಿಗೆಳೆದಿದ್ದಾರೆ ?

೮ ಈ ಸಂಭಾಷಣೆಯನ್ನು ಮಹಾಲಿಂಗನ ಆತ್ಮಚರಿತ್ರೆಯಾಗಿ ೩೦ ಸಾಲುಗಳಲ್ಲಿ ಬರೆಯಿರಿ.



# ಅಂತರಾತ್ಮನಿಗೆ



ಈ ಹೊತ್ತು ಎನ್ನ ಹುಟ್ಟಿದ ದಿವಸ. ಈ ದೇಹವು ಜನ್ಮ ತಾಳಿದ ದಿವಸ, ವರ್ಷಕ್ಕೊಮ್ಮೆ ನೆನಪಾಗುವುದು. ಅವ್ಯಕ್ತದಿಂದ ವ್ಯಕ್ತಸೃಷ್ಟಿಗೆ ನಾನು ಬಂದ ನೆನಪಿದು. ಆದರೆ ಈ ನೆನಪಿನಿಂದೇನು? ವರ್ಷದಲ್ಲಿ ಪೃಥ್ವಿ ಸೂರ್ಯನ ಪ್ರದಕ್ಷಿಣೆ ಮುಗಿಸಿತು. ಮಹನೀಯರು ಎಂತೆಂತಹ ಮಹತ್ಕಾರ್ಯಗಳನ್ನು ಸಾಧಿಸಿದರು ಒಂದೇ ವರ್ಷದಲ್ಲಿ. ಆದರೆ ನಾನೇನು ಮಾಡಿರುವೆ ದೇವಾ? ನಾನೇನು ಕೃತಕೃತ್ಯ ಮಾಡಿರುವೆನೆಂದು ನೆನೆಯಬೇಕು ಈ ದಿವಸ ದೇವಾ? ತಿರುಗಿ ನೋಡಿದೆಲು, ನಾನು ವರ್ಷದಲ್ಲಿ ನಡೆದ ದಾರಿ ಎಷ್ಟು? ಇಂಥ ಪರಿ ಏಕೆ ಹುಟ್ಟಿಸಿ ಬೆಳೆಸಿದ ಎನ್ನನ್ನು ಸ್ವಾಮೀ? ಇಂಥ ಪರಿ ನನಗೆ ಈ ಹುಟ್ಟಿದ ನೆನಪೇಕೆ ಕೊಡುವೆ? ಆನೆಗೆ ಆನೆಯ ಶಕ್ತಿಯಾದರೂ ಆಡಿಗೆ ಆಡಿನ ಶಕ್ತಿ ಬೇಡವೇ? ಈ ಪರಿ ದುರ್ಬಲನನ್ನಾಗಿ ಬದುಕಿಸುವುದಕ್ಕಿಂತ ಮುಗಿಸಿ ಬಿಡು ಈ ಜೀವನ ಯಾತ್ರೆಯ! ನಿನ್ನ ಬಲದ ಭಂಡಾರವೇನು ಬರಿದಾಯಿತೇ? ಅಥವಾ ನೀನೆ ಈಗ ಕೃಪಣನಾದೆಯಾ? ನಾನೊಲ್ಲೆನೊಲ್ಲೆನೀಪರಿಯ. ನೆನಪು—ಹುಟ್ಟಿದ ದಿನ ಸಾವಿನ ದಿನವಾಗಲೆಂದು ಹಾರೈಸುವಂತಾಗಿದೆ ಎನಗೆ. ಎನ್ನನ್ನು ಬದುಕಿಸಿ ಬಾಳಿಸುವುದಿದ್ದರೆ ಗಿಡಬಳ್ಳಿಗಳು ಚಿಗಿಯುವಂತೆ ಎನ್ನ ಶಕ್ತಿಗಳೆಲ್ಲ ಚಿಗಿಯಲಿ, ಅವುಗಳ ಹೂ ಘೂನಿ

ತಾಯಿಗೆರಗುವಂತೆ ನನ್ನ ದೇಹ ಮನ ಪ್ರಾಣಗಳೆಲ್ಲ ನಿನ್ನ ಚರಣಕ್ಕೆರಗಲಿ; ತರುಗಳ ಹಣ್ಣೆಲ್ಲ ಪ್ರಾಣಿಗಳಿಗೆ ಅನ್ನವಾಗುವಂತೆ, ನನ್ನ ಕರ್ಮಗಳೆಲ್ಲ ವಿಶ್ವಕುಪಕಾರಿಯಾಗಲಿ. ಈ ಪರಿ ಬದುಕಿಸು ಪ್ರಭುವೇ, ಈ ಪರಿ ಬಾಳಿಸು ದೇವಾ. ಇದನ್ನೇ ಬೇಡುವೆ ಈ ದಿನ, ನನ್ನ ಅಂತರಾತ್ಮಾ.

× × ×

ನನ್ನೊಳಿರ್ಪ ಬಂಧುವಿನ ಆಲಾಪವೇನೆಂದರೆ— 'ಇದೇನು, ಈ ಸಂಸಾರದಲಿ ನಿಜ ಸುಖವನರಸುವುದೀ ಜನ! ಇಲ್ಲಿ ಎಲ್ಲಿಂದ ಬರಬೇಕದು? ಹಾ, ನನ್ನ ಜೀವನವೆಲ್ಲ ನಿರಾನಂದವಾಯಿತಲ್ಲ! ಜಡವತ್, ಯಂತ್ರವತ್ ಈ ಸಂಸಾರ ಕರ್ಮಗಳನು ಮಾಡುತಿರುವೆ ನಾನು. ಆ ಉತ್ತುಂಗ ಹಿಮಾಚಲದ ಪವಿತ್ರ ತಪೋಭೂಮಿಯತ್ತ ಇಲ್ಲವೆ ಸತ್ಪುರುಷರ ಸಂಗದತ್ತ ಎಳಸುವದೀ ಮನ'— ಆತ್ಮಬಂಧುವೇ ಇಷ್ಟೊಂದು ನಿರಾಶೆಯೇಕೆ? ಸಂಸಾರವನು ಕುರಿತು ಇಷ್ಟೊಂದು ಹೇಯಭಾವವೇಕೆ? ಅದನ್ನು ಆವನೇ ಮಾಡಿಲ್ಲವೇ? ಅದೇನು ವಿಷಕೂಪವೇ? ಹಾಗಿದ್ದರೂ ಅದನ್ನು ಅಮೃತಮಯ ಮಾಡುವ ಮಾಟಗಾರಿಕೆ ಆತ್ಮನಲ್ಲಿಲ್ಲವೆ? ನೀನು ಹುಡುಕುತ್ತಲಿರುವುದು ಆತ್ಮಾನಂದ. ಅದು ಸಂಸಾರದಲ್ಲಿಯೂ ಇಲ್ಲ, ಹಿಮಗಿರಿಯಲ್ಲಿಯೂ ಇಲ್ಲ, ಸತ್ಪುರುಷರ ಪಾದದೆಡೆಗೂ ಇಲ್ಲ. ಅದು ಆತ್ಮನಲ್ಲಿಯೇ ಇದೆ. ನಿರ್ಮಲ ಚಿತ್ತದ ಕೊನೆಯ ಮೊನೆಯ ಧಾರೆಯದು. ಆತ್ಮನು ಆನಂದಮಯನು, ಆನಂದ ಸ್ವರೂಪನು. ಆತ್ಮವೇ ಆನಂದ ಆನಂದವೆ ಆತ್ಮ. ನಿರಾಲಂಬ ಸ್ವಯಂಭು ಸುಖವೆ ಆನಂದ. ಈ ಜ್ಞಾನಾನುಭವದಿಂದಲೆ ಆನಂದಪ್ರಾಪ್ತಿ. ಹೃದಯಾಂತರದಲ್ಲಿ ಈ ಜ್ಞಾನದ ಸೆಲೆಯೊಡೆಯುವನಕ ಎಲ್ಲಿ ಹೋದರೇನು ಬಂದರೇನು, ಅಮೃತದ ಆಸೆಯೇಕೆ? ನಿಷ್ಕಾಮ ಸಮರ್ಪಣ ಭಾವವೆ ಹೃದಯ ಕವಾಟದ ಕೈ. ಬಂಧುವೇ, ಇದ್ದಲ್ಲಿ, ಇದ್ದ ಹಾಗೆ, ಅಲ್ಲಿ ಇಲ್ಲಿ ಹೋಗಬೇಕೆನ್ನದ ಅಂತರಂಗದಲ್ಲಿಯೆ ಈ ಸಾಧನವನ್ನಾರಂಭಿಸುವ.

ಹೇ ಅಂತರಾತ್ಮ, ಈ ಸಾಧನ ಮಾಡಲು ನನಗೆ ಬಲ ಶೀಲ ಗಳನ್ನು ದಯಪಾಲಿಸು.

ನೀ ಹೇಳಿರುವುದು ಜನಸೇವೆ, ಜನತಾ ಜನಾರ್ದನ ಸೇವೆ, ಸ್ವಾಮಿ. ಜನಸೇವೆಯೇ ನಿನ್ನ ಸೇವೆ ಎಂದು ಸಾರಿರುವಿ ನೀನು. ಆದರೇನು ? ನಾನೇನನ್ನು ಮಾಡಬಲ್ಲೆ ದೇವಾ, ನಾನೆಷ್ಟು ಮಾಡಬಲ್ಲೆ ದೇವಾ, ನಾನೆಂತು ಮಾಡಬಲ್ಲೆ ದೇವಾ ? ಅಯ್ಯೋ! ಈ ಜನರಲ್ಲಿ ಮುಸುಕಿದ ಅಜ್ಞಾನವ, ಈ ದಾರುಣ ದಾರಿದ್ರ್ಯವ, ಈ ದುರ್ವ್ಯಸನವ, ಈ ಮಹಾದೃಶ್ಯವ ನಾನೇನು ಕಳೆಯಲಾ ರೆನು, ಪ್ರಭುವೆ ? ತಮುಂಥ ತೊಡೆಯಲು ಹೊಸ್ನೀ ಹುಳ ಹೊರಟಿಂತಾಯ್ತು, ಪೃಥ್ವೀ ಪ್ರದಕ್ಷಿಣೆಗೆ ಇರುವೆ ಕಾಲಿಟ್ಟಂತಾ ಯ್ತು, ಮೂಢ ವೇದವನೋದಲು ಮೊದಲು ಮಾಡಿದಂತಾಯಿತು ನಿನ್ನ ಈ ಪರಿ ಪ್ರಯತ್ನ ಸ್ವಾಮಿ. ನಗೆಗೇಡು ಮಾಡಲು ಹೇಳಿ ದೆಯಾ ಎನಗೆ ಈ ಕಾರ್ಯವ? ಎನ್ನ ಕೀರ್ತನವ ಕೈಮಾಡಿ ತೋರಿಸಲು ಹೇಳಿದೆಯಾ ಎನಗೆ ಈ ಕೆಲಸವ ? ಎನ್ನ ಲೋಕವ ನೋಡಿ ಹೇಳಬಾರದೆ ತಂದೆ, ನನಗೆ ನಾ ಮಾಡುವ ಮಾಟವ ? ಇನ್ನು ಸಾಕಿ ಕೋರದು ಅಂತರಾತ್ಮಾ, ಇವರೊಳಗಿಂದ ಕದ ದಾಯಲು. ಪ್ರಭುವಿನಾಣೆಯನು ಎನಗಬೇಕಲ್ಲವೆ ?

ಎಂದೋ ಈ ಕತ್ತಲೆ ಹರಿದು ಬೆಳಗಾಗುವುದು? ಎಂದೋ ಈ ಸ್ವಾರ್ಥ ಹೋಗಿ ಪರಾರ್ಥ ನೆಲೆಗೊಳ್ಳುವುದು? ಎಂದೋ ಈ ಮೂಢತನ ಹೋಗಿ ಜಾಣತನ ಬರುವುದು ಈ ಮನುಜ ಸಂತತಿಗೆ! ಎಂದೋ ನೀತಿ, ಸತ್ಯ, ಬಾಂಧವ್ಯಗಳ ತವರೂರಾ ಗುವುದು ಈ ಮುತ್ತು ಸಮಾಜ! ಈ ಭೂಮಿ ನೀರು ಧನಕನಕ, ಈ ಕಣ್ಣಿಗೆ ಕಾಣುವ ಸಿರಿ-ಸಂಪತ್ತು ಇವೆಲ್ಲ ಸಮಾ ಜದ್ದು! ನನ್ನ ಶಾರೀರಿಕ ಮಾನಸಿಕ ನೈತಿಕ ಶಕ್ತಿ ಸಾಮರ್ಥ್ಯ ಗಳನ್ನೆಲ್ಲ ವಿಕಾಸಗೊಳಿಸಿ, ಬಲಿಸಿ ನಾನು ಈ ಸಮಾಜ ದೇವ ತೆಗೆ ಅರ್ಪಿಸಬೇಕು, ಎಂಬ ಸ್ಫೂರ್ತಿ ಪ್ರತಿ ಮಾನವನ ಮನೋ

ಮಂಡಲದಲ್ಲಿ ಮೂಡಿ ಮನೆ ಮಾಡುವನಕ ಅಸಾಧ್ಯ, ಸಮಾಜ ಸುಸಂಘಟನೆ ಅಸಾಧ್ಯ, ದೇವಾ. ಹೀಗೆಂದು ಮಾಡಬೇಕೆನ್ನುವಿ ಹೀಗೆಂದು ಮಾಡಿ ಮಾನವ ಕುಲವನು ಸಲಹಬೇಕೆನ್ನುವಿ, ಅಂತರಾತ್ಮಾ.

× × ×

ಅಹಾ! ಆಕಾಶದ ಈ ತಾರೆಗಳು, ಈ ಅಗಣಿತ ತಾರಾಗಣ—ಕವೇ ಕಾಳ ರಾತ್ರಿಯಲಿ ಒಂದೊಂದೆ ಒಂದೊಂದೆ ಮೂಡಿ ನಿಶಾದೇವಿಯ ಮುಕುಟ ಮಣಿಗಳಂತೆ ನಭೋಮಂಡಲವ ತುಂಬಿ ಬಿಡುತಿರುವವು. ತಮ್ಮ ತಮ್ಮ ಪರಿ ತೂಗುತ್ತ ಬೀಗುತ್ತ ಅನಂತ ಪಥದಲ್ಲಿ ಸಾಗುವವು. ಅವುಗಳ ಮೂಡು ಮುಳುಗುಗಳನು ನಾನು ಪ್ರತಿನಿತ್ಯ ನೋಡುತಿರುವೆ. ಆದರೇನು, ಅವುಗಳ ಹುಟ್ಟು ಸಾವುಗಳನರಿತವರುಂಟೆ? ಅವು ಕಾಣುವುದೇಕೆ ಅಡಗುವುದೇಕೆ ಯಾರುಬಲ್ಲರು? ಅವುಗಳ ಮಿನುಗಿನಿಂದೇನು ಕತ್ತಲೆ ಹರಿಯುವುದೆ? ಇಲ್ಲ. ಪಥಿಕರಿಗೆ ದಾರಿ ಕಾಣುವುದೇ? ಇಲ್ಲ ಇಲ್ಲ. ಒಬ್ಬ ಬಡವನ ಮನೆಯಾದರೂ ಬೆಳಗುವುದೆ? ಸರ್ವಥಾ ಇಲ್ಲ. ಆದರೂ ವಿಶ್ವದೇವಿ ಘನನೀಲ ಪಾತ್ರೆಯಲಿ ಈ ಮಲ್ಲಿಗೆಯ ಹೂ ತುಂಬಿ ತುಂಬಿ ಶಾಂತ ನಿಶಾ ಸಮಯದಲಿ ನಿನ್ನ ಗೂಢ ಪಾದಗಳಮೇಲೆ ನಿಚ್ಚ ನಿಚ್ಚ ಎರಚುತಿರುವಳು. ಆ ಚಿಕ್ಕೆಗಳಲಿ ನನ್ನನೊಂದು ಚಿಕ್ಕೆ ಮಾಡು ದೇವಾ, ಆ ಮಲ್ಲಿಗೆಯ ರಾಶಿಯಲಿ ನನ್ನನೊಂದು ಅಡವಿ-ಮಲ್ಲಿಗೆ ಮಾಡಿ ಇರಿಸು ಸ್ವಾಮಿ. ಎನ್ನ ಹುಟ್ಟು ನಾನರಿಯೆ, ಎನ್ನ ಸಾವು ನಾನರಿಯೆ. ಯಾಕೆಂದು ಹೋಗುವೆ, ಏನೆಂದು ಬರುವೆ, ನಾನರಿಯೆ. ಬಂದುದೆಲ್ಲಿಂದ ಸಾಗುವುದೆಲ್ಲಿಗೆ ನಾನರಿಯೆ. ಇಲ್ಲಿರುವನಕ ಮಿನುಕಿ ಮಿನುಕಿ ಒಮ್ಮೆಯಾದರೂ ನಿನ್ನಡಿಯ ನೋಡಿದರೆ ಅದೇ ಎನ್ನ ಜೀವನ ಸಾರ್ಥಕವು, ಜೀವದೊಡೆಯಾ. ಇದಕಾಗಿಯೆ ಮಿಡುಕುವೆ, ಇದನೆ ಬೇಡುವೆ, ಇದನೆ ಹಾಡುವೆ, ಕಾಡಿ ಕಾಡಿ ನಿನ್ನನು ಇದನೆ ಕೇಳುವೆ, ಅಂತರಾತ್ಮಾ ಕೊಟ್ಟು ಕಡೆಹಾಯಿಸು.

# ಪರಿಚಯ.

'ಅಂತರಾತ್ಮನಿಗೆ' ಎಂಬ ವಚನಗಳಿಂದ ತಮ್ಮ ಅಂತರಾತ್ಮವನ್ನು ಬಿಚ್ಚಿಟ್ಟಿರುವ ಶ್ರೀ. ದಿವಾಕರ ರಂಗನಾಥರಾಯರು ಕನ್ನಡಿಗರಿಗೆ ನುರಿತ ಲೇಖಕರೂ, ರಾಷ್ಟ್ರಭಕ್ತರೂ, ನಿಸ್ಸೀಮ ತ್ಯಾಗಿಗಳೂ ಎಂದು ಪರಿಚಿತರಾಗಿದ್ದಾರೆ. ರಾಷ್ಟ್ರೀಯ ಸಭೆಯ ಮೂಲಕ ಭಾರತ ರಾಷ್ಟ್ರದಲ್ಲಿ ಎಲ್ಲೆಡೆಗೂ ಇವರಿಗೆ ಮನ್ನಣೆಯಿದೆ. ಅಧ್ಯಾತ್ಮ ಕಾರ್ಯಾಲಯದಿಂದ ಅಧ್ಯಾತ್ಮ ಸಾಹಿತ್ಯ ರಾಷ್ಟ್ರೀಯ ವಾಙ್ಮಯ ಪ್ರಕಾಶನದ ಮೂಲಕವಾಗಿ ರಾಷ್ಟ್ರೀಯ ಸಾಹಿತ್ಯ ಮೊದಲಾದ ವಿಚಾರ ಸಾಹಿತ್ಯವನ್ನು ಕನ್ನಡಕ್ಕೆ ನೀಡುತ್ತಿದ್ದಾರೆ. ರಾಜಕಾರಣದಿಂದುಂಟಾದ ಕಾರಾಗೃಹವಾಸ ಅನೇಕರಿಗೆ ಸಾಹಿತ್ಯ ನಿರ್ಮಾಣಕ್ಕೆ ಕಾರಣವಾದಂತೆ ಇವರಿಗೂ ಆಗಿದೆ. ಅಂತರಾತ್ಮದ ವಚನಗಳೆಲ್ಲ ಇವರು ಹಿಂಡಲಗಿ ಸೆರಮನೆಯಲ್ಲಿದ್ದಾಗ ೧೯-೩-೩೨ರಿಂದ ೭-೭-೩೮ ರ ಕಾಲಾವಧಿಯಲ್ಲಿ ಬರೆದವುಗಳು. ಒಟ್ಟು ೫೭ ವಚನಗಳನ್ನು ಬರೆದಿದ್ದಾರೆ. ಇವುಗಳು ನೂತನವಾದ ಶೈಲಿ, ಅರ್ಥಗಾಂಭೀರ್ಯ, ಆರ್ತಭಕ್ತಿಯ ಮನೋಭಾವ ಇವುಗಳಿಂದ ಚಿತ್ತಾಕರ್ಷಕವಾಗಿವೆ.

## ಅಭ್ಯಾಸ

೧ ಹಿಂದೆ ಓದಿದ ಪಾಠಗಳ ಶೈಲಿಗೂ ಈ ಪಾಠದ ಶೈಲಿಗೂ ಯಾವ ಅಂತರವಿದೆ? 'ಉದಾತ್ತ ವಿಚಾರಕ್ಕೆ ಉದಾತ್ತ ಶೈಲಿಯೆ ಉಚಿತವಾದದ್ದು' ಎಂಬ ಮಾತನ್ನು ಇಲ್ಲಿಯ ಶೈಲಿಯ ವಿಚಾರದಲ್ಲಿ ವಿಮರ್ಶಿಸಿರಿ.

೨ ಈ ಶೈಲಿ ಮತ್ತು ಭಾಗದಲ್ಲಿಯ ವಿಚಾರಗಳ ರೀತಿಯನ್ನು ವೀರಶೈವ ಶರಣರ ವಚನಗಳಿಗೆ ಹೋಲಿಸಿ ನೋಡಿರಿ. "ವಚನಶಾಸ್ತ್ರ ಸಾರ ವಚನಶಾಸ್ತ್ರ ರಹಸ್ಯ" ಈ ಪುಸ್ತಕಗಳಲ್ಲಿಯ ಕೆಲವು ವಚನಗಳನ್ನು ನೋಡಿರಿ.

೩ ರವೀಂದ್ರನಾಥ ಠಾಕೂರರ "ಗೀತಾಂಜಲಿ"ಯಲ್ಲಿಯ ವಚನಗಳನ್ನೋದಿ ಇವುಗಳೊಡನೆ ಹೋಲಿಸಿರಿ.

೪ ದಾಸರ ಹಾಡುಗಳಲ್ಲಿಯ ವಿಚಾರ ಪ್ರವಾಹವೂ ಇದೇ ತೆರನಾಗಿದೆ. ಕೆಲವು ಹಾಡುಗಳನ್ನು ಸಂಗ್ರಹಿಸಿ ಅಭ್ಯಾಸ ಮಾಡಿರಿ.

೫ "ವಚನಗಳ ಶೈಲಿ ಕಾವ್ಯಮಯವಾದುದು" ಎನ್ನಬೇಕಾದರೆ ವಚನಗಳಲ್ಲಿ ಕಾವ್ಯದ ಯಾವ ಯಾವ ಗುಣಗಳು ಕಾಣುವವು?

೬ (ಅ) ಮೊದಲನೆಯ ವಚನದಲ್ಲಿ ಕಾಣುವ 'ನಿರಾಶೆಯು' ಉತ್ಕರ್ಷಕ್ಕೆ ಹೇಗೆ ಸಾಧನವಾಗಬಹುದು ?

(ಬ) ಸಂಸಾರದಲ್ಲಿ ದೃಷ್ಟಿ ಎಂತಿರಬೇಕು ? ಜೀವನದಲ್ಲಿ ಆನಂದ ಮತ್ತು ಜ್ಞಾನ ಇವುಗಳಿಗೆ ಯಾವ ಸ್ಥಾನವಿದೆ ?

(ಕ) ಜನಾರ್ಧನ ಸೇವೆಗಿಂತ ಜನತಾಸೇವೆ ಹೇಗೆ ಶ್ರೇಷ್ಠವು? ಅಂತಹ ಸೇವೆ ಮಾಡಲು ನಮ್ಮಲ್ಲಿ ಯಾವ ಸಾಮರ್ಥ್ಯ ಬೇಕು ?

(ಡ) ಆದರ್ಶ ಸಮಾಜದ ವಿಶೇಷ ಲಕ್ಷಣಗಳಾವವು ?

(ಇ) ಐದನೆಯ ವಚನದಲ್ಲಿಯ ಪದಲಾಲಿತ್ಯಪ್ರಕೃ ಮಾತುಗಳನ್ನು ಆಯ್ದು ಬರೆಯಿರಿ.



# ಕಾಡಿನಲ್ಲಿ ಕಳೆದ ಒಂದಿರುಳು

ಸಂಜೆಗೆ ಮುನ್ನವೇ ಊಟ ಮಾಡಿದೆವು. ಒಬ್ಬೊಬ್ಬರು ಎರಡೆರಡು ಜಗ್ಗಂಬಳಿಗಳನ್ನು ಹೆಗಲ ಮೇಲೆ ಹಾಕಿಕೊಂಡು ತೋಟಾ ಕೋವಿಗಳನ್ನು ಹಿಡಿದುಕೊಂಡು ಮನೆಯಿಂದ ಹೊರಟು ಕಾಡಿನ ಕಡೆಗೆ ನಡೆದೆವು. ನಮ್ಮ ಹಣ್ಣಿನ ಮರದ ಅಟ್ಟಣೆ ಮನೆಯಿಂದ ದೂರ ಅರಣ್ಯದ ನಡುವೆಯಿತ್ತು. ಕತ್ತಲಾದ ಮೇಲೆ ಕಾಡಿನಲ್ಲಿ ದಾರಿ ಹುಡುಕುವುದು ಕಷ್ಟವೆಂದು ತಿಳಿದು ಸ್ವಲ್ಪ ಮುಂಚಿತವಾಗಿಯೇ ಹೊರಟಿದ್ದೆವು.

ಸಾಯಂಕಾಲವಾಗಿದ್ದರೂ ನೇಸರು ಇನ್ನೂ ಮುಳುಗಿರಲಿಲ್ಲ. ನಾವು ಬೆಟ್ಟವೇರಿದೆವು—ಮೊದಲು ಆಗ್ನೇಯ ಮುಖವಾಗಿ, ತರುವಾಯ ಈಶಾನ್ಯದ ಕಡೆಗೆ, ಬನಗಳೆಲ್ಲ ಬೈಗುಗೆಂಪಿನಿಂದ ತೊಯ್ದು ಹೋಗಿದ್ದುವು. ಮುಕ್ಕಾಲು ಮೂರುವೀಸ ಪಾಲು ಹಕ್ಕಿಗಳೆಲ್ಲ ಗೊತ್ತು ಸೇರಿದ್ದುವು. ಎಲ್ಲಿಯೋ ಒಂದೆರಡು ಕಾಜಾಣಗಳು ಆಲಾಪನೆ ಮಾಡುತ್ತಿದ್ದುವು. ಪಡುವಣ ದೆಸೆಯ ಕೆಮ್ಮುಗಿಲು ನೋಡುವುದಕ್ಕೆ ಮನೋಹರವಾಗಿದ್ದರೂ ಕಾಲವಿಳಂಬವಾದರೆ ಕಷ್ಟಕ್ಕೆ ಈಡಾಗುವೆವೆಂದು ತಿಳಿದು ಬೇಗ ಬೇಗನೆ ಮುಂಪೆಳಿದೆವು. ನಾವು ಮುಂಬರಿದಂತೆಲ್ಲ ಕಾಂತಿ ಹೀನವಾಗುತ್ತ ಕಡೆಗೆ ಮುಚ್ಚಂಜೆಯ ಮಬ್ಬು ಕವಿಯಿತು. ಸೂರ್ಯನೂ ಮಲೆನಾಡಿನ

ಉನ್ನತ ಗಿರಿವನ ಶ್ರೇಣಿಗಳ ಶಿಖರ ಪ್ರಾಂತದಿಂದ ಪಡುಗಡಲಿಗೆ
ಉರುಳಿ ಬಿಟ್ಟನು. ಎಲ್ಲ ಮಸುಗಪ್ಪಾಯಿತು.

ಬೇಗ ಬೇಗನೆ ನಡೆದೆವು. ಅರಣ್ಯ ನಿಬಿಡತರವಾದಂತೆಲ್ಲ
ಮಾತಾಡತೊಡಗಿದೆವು. ಹೊದರುಗಳ ನಡುವೆ, ಇಲ್ಲದ ಹಾದಿ
ಯನ್ನು ಊಹಿಸಿ ಧಾವಿಸಿದೆವು. ಬನಗತ್ತಲು ಹೆಚ್ಚುತ್ತಿತ್ತು, ಮುತ್ತಿ
ಗೆದರಿನಿಂತ ಎತ್ತರವಾದ ಹೆಮ್ಮರಗಳ ನಡುನಡುವೆ ತಾರಕಿತ
ನೀಲಾಕಾಶ ಅಲ್ಲಲ್ಲಿ ಗೋಚರವಾಗುತ್ತಿತ್ತು. ದಾರಿಗೆ ಅಡ್ಡವಾಗಿ
ಬೆಳೆದ ಮುಳ್ಳು ಬಳ್ಳಿಗಳನ್ನು ಎಡವುತ್ತ ಗುಡ್ಡವೇರಿದೆವು. ಕಾಡಿ
ನೊಳಗೆ ಹೋದಂತೆಲ್ಲ ತಿಮಿರದೊಡನೆ ಮೌನವೂ ಇಮ್ಮಡಿ
ಯಾಯಿತು. ಜೊತೆಗೆ ಒಂದು ವಿಧವಾದ ಭಯವೂ ಪ್ರೇತದಂತೆ
ನಮ್ಮ ಸುತ್ತಲೂ ಸುಳಿದಾಡಿತು.

ನಾವು—ನಾನು, ತಿಮ್ಮು, ಓಬು—ನಮ್ಮ ಗೊತ್ತುಗಳನ್ನು
ಸೇರಿದಾಗ ಎಲ್ಲ ಕಪ್ಪಾಗಿ ಹೋಗಿತ್ತು. ಪಿಸುಮಾತುಗಳಿಂದ
ಒಬ್ಬರನ್ನೊಬ್ಬರು ಬೀಳ್ಕೊಂಡೆವು. ಒಬ್ಬರಿಗೊಬ್ಬರು ಎಚ್ಚರಿಕೆ
ಹೇಳಿದೆವು. ಒಬ್ಬರಿಗೊಬ್ಬರು ಧೈರ್ಯ ಹೇಳಿದೆವು. ಆದರೆ ನಿಜ
ವಾಗಿಯೂ ಒಬ್ಬರಿಗೆ ಇನ್ನೊಬ್ಬರ ಧೈರ್ಯವಾಗಿತ್ತೇ ಹೊರತು
ಒಬ್ಬರಲ್ಲಿಯೂ ಇರಲಿಲ್ಲವೆಂದೇ ತೋರುತ್ತದೆ.

ನಮ್ಮ ಹಣ್ಣಿನಮರ ಒಂದು ದೊಡ್ಡ ಕಾಡು ಮಾವಿನ
ಮರವಾಗಿತ್ತು. ಅದರ ಸುತ್ತು ಮುತ್ತಲಿದ್ದ ಮರಗಳಲ್ಲಿ ಅಟ್ಟಣೆ
ಗಳನ್ನು ಕಟ್ಟಿದ್ದೆವು. ನನಗೂ ತಿಮ್ಮುಗೂ ಸುಮಾರು ಇಪ್ಪತ್ತು
ಗಜ ದೂರ; ನನಗೂ ಓಬುಗೂ ಸುಮಾರು ಹದಿನೈದು ಗಜ
ದೂರ. ಆದರೂ ಆ ಮಾರಿಕಾಡಿನಲ್ಲಿ ಜೊತೆಯವರು ಒಂದು
ಮಾರು ದೂರವಿದ್ದರೂ ಹರಿದಾರಿ ದೂರವಿದ್ದಂತೆಯೇ ಭಾಸ
ವಾಗುವದು. ನಾನು ನನ್ನ ಅಟ್ಟಣೆಯಿಂದ ಮರದ ಬುಡವನ್ನು
ಸೇರಿ, ಮೊದಲು ಕಂಬಳಿಗಳನ್ನು ತೆಗೆದುಕೊಂಡು ಬಹು ಶ್ರಮ
ದಿಂದ ಮೇಲೇರಿ ಅಟ್ಟಣೆಯಲ್ಲಿಟ್ಟು ಮರಳಿ ಕೆಳಗಿಳಿದೆ. ಕೋವಿ

ರುಪ್ಲಿಪ್ಪ ತೋಟಾಗಳನ್ನು ತೆಗೆದು ಜೇಬಿಗೆ ಹಾಕಿಕೊಂಡು, ಬಂದೂಕನ್ನು ಕುತ್ತಿಗೆ ಕಂಕುಳಗಳ ಸಹಾಯದಿಂದ ಭದ್ರವಾಗಿ ಹಿಡಿದುಕೊಂಡು, ಮರವನ್ನೂ ಜೀವವನ್ನೂ ಕೈಯಲ್ಲಿ ಹಿಡಿದುಕೊಂಡು ಅಟ್ಟಣೆಗೇರಿದೆ. ಅಲ್ಲಿ ಸ್ವಲ್ಪ ಹೊತ್ತು ನಿಟ್ಟುಸಿರೆಳೆದು ಎದೆಯ ಬಡಿತ ಸ್ವಲ್ಪ ಕಡಿಮೆಯಾದ ಮೇಲೆ ಒಂದು ಕಂಬಳಿಯನ್ನು ಹಾಸಿದೆ. ಇನ್ನೊಂದನ್ನು ಹೊದೆಯಲು ಇಟ್ಟೆ. ಜೇಬಿನಲ್ಲಿದ್ದ ಒಂದು ಚಿಕ್ಕ ಕಾಫಿಯ ಸೀಸೆಯನ್ನು ತೆಗೆದು ಒಂದು ಮೂಲೆಯಲ್ಲಿಟ್ಟೆ. ಇಟ್ಟವನು ಹಾಗೆಯೇ ಎತ್ತಿಕೊಂಡು ಸ್ವಲ್ಪ ಕಾಫಿಯನ್ನು ಬಾಯಿಗೆ ಸುರಿದುಕೊಂಡೆ. ಆ ಕತ್ತಲಲ್ಲಿ ಗುರಿ ತಪ್ಪಿ ಮೂಗಿಗಷ್ಟು ಹೋಯಿತು. ಕಾಡಿನಲ್ಲಿ ಬೇಟೆಗೆ ಹೋದಾಗ, ಅದರಲ್ಲಿಯೂ 'ಮರಸಿ'ಗೆ ಹೋದಾಗ ಸ್ವಲ್ಪವೂ ಸದ್ದು ಮಾಡಬಾರದು. ಪ್ರಾಣಿಗಳಿಗೆ ಮನುಷ್ಯರಿರುವ ಸೂಚನೆ ಹೊಳೆದರೆ ಸಾಕು ಆ ಎಡೆಗೆ ಕಾಲಿಡುವುದೇ ಇಲ್ಲ. ಈ ವಿಚಾರವನ್ನು ತಿಳಿದವರಿಂದ ಕೇಳಿಯೂ ಇದೆ. ಹಿಂದೆ ಅನುಭವದಿಂದ ಅರಿತೂ ಇದೆ. ಆದರೇನು ಮಾಡುವುದು? ಹಾದಿ ತಪ್ಪಿದ ಕಾಫಿ ಶ್ವಾಸಕೋಶದ ಮಾರ್ಗವನ್ನು ಹಿಡಿದುಬಿಟ್ಟಿದ್ದರಿಂದ, ಸೀನು ಕೆಮ್ಮು ಎಲ್ಲ ಒಟ್ಟಿಗೆ ಬಂದವು. ನಾನೂ ತಡೆದೆ; ತಡೆದೆ ಕಡೆಗೆ ತಡೆದಷ್ಟೂ ಪ್ರಬಲವಾಗಿ ಟಗರಿನಂತೆ ಸೀನಿ ಕೆಮ್ಮಿಯೂ ಬಿಟ್ಟೆ! ಕಾಡಿನಲ್ಲಿ ಕಡ್ಡಿ ಮುರಿದರೂ ದೊಡ್ಡ ಸದ್ದಾಗುತ್ತದೆ. ಮೌನ ಸರೋವರಕ್ಕೆ ವನಮಹಿಷವು ಧುಮ್ಮಿಕ್ಕಿದಂತಾಗಿ ಒಂದುಸಾರಿ ಕಾಡೆಲ್ಲ ಅಲ್ಲೋಲ ಕಲ್ಲೋಲವಾದಂತಾಯಿತು. ನಾನು ಮಾಡಿದ ತಪ್ಪಿನ ಮಹತ್ತು ನನಗಾಗ ಗೊತ್ತಾಗಲಿಲ್ಲ. ಬೆಳಿಗ್ಗೆ ಗೊತ್ತಾಯಿತು. ಓಬು ಕುಳಿತು ಎರಡು ನಿಮಿಷವಾಗುವದರೊಳಗೆ ಒಂದು ಕಣೆಹಂದಿಯ ಹಿಂಡು ಹಣ್ಣಿನ ಮರಕ್ಕಾಗಿ ಬರುವುದನ್ನು ಕಂಡು, ಆ ಕತ್ತಲಲ್ಲಿ ಬಹಳ ಶ್ರಮದಿಂದ ಗುರಿಯಿಡುತ್ತಿದ್ದನಂತೆ. ನಾನು ಸೀನಿದ ಹೊಡತಕ್ಕೆ ಅವುಗಳೆಲ್ಲ ಕಾಲಿಗೆ ಬುದ್ಧಿ ಹೇಳಿಬಿಟ್ಟುವಂತೆ. ಅವನು ನನ್ನ ಮೇಲೆ ಬಹಳ ಸಿಟ್ಟಾಗಿ ಶಪಿಸಿಬಿಟ್ಟನಂತೆ, ಮನದಲ್ಲಿಯೇ.

ಹುಣ್ಣಿಮೆಯಾಗಿ ಆಗಲೇ ಎರಡು ದಿನಗಳಾಗಿದ್ದುವು. ಆದ ರಲ್ಲಿಯೂ ಚಂದ್ರನು ಪರ್ವತಗಳನ್ನು ಏರಿ ಮೇಲೆ ಬರುವುದು ಸ್ವಲ್ಪ ಹೊತ್ತು. ಆ ರಾತ್ರಿ ಸುಮಾರು ಹನ್ನೊಂದು ಗಂಟೆ ಯಾಯಿತೆಂದು ತೋರುತ್ತದೆ. ಅವನು ಕಾಣಿಸಿಕೊಳ್ಳಲು ಅಂತೂ ಕಗ್ಗತ್ತಲೆ ಕವಿದಿತ್ತು. ಕಾಡಿನಲ್ಲಿ ಕಗ್ಗತ್ತಲೆ ಎಂದರೆ ಹೇಗಿರುವು ದೆಂಬುದನ್ನು ಅನುಭವದಿಂದ ತಿಳಿಯಬೇಕಲ್ಲದೆ ಬಣ್ಣಿಸಿದರೆ ಸಾಲದು. ಗಿಡಮರಗಳೆಲ್ಲ ಕತ್ತಲಲ್ಲಿ ಕರಗಿಹೋಗಿದ್ದುವು. ಸಮಸ್ತ ವಿಶ್ವವೂ ತಿಮಿರಬ್ರಹ್ಮಸಮಾಧಿಯಲ್ಲಿ ಲೀನವಾದಂ ತಿತ್ತು. ದೇಹದ ಅನುಭವಕೂಡ ಇರಲಿಲ್ಲ. 'ನಾನು' ಎಂಬ ಅಹಂಕಾರಭಾವವೊಂದೇ ಉಳಿದಿತ್ತು. ಆ ಮೌನವೂ ಕೂಡ ಕತ್ತಲೆಗೆ ಸರಿಸಮವಾಗಿಯೇ ಇತ್ತು. ಮುಟ್ಟಿ ಅನುಭವಿಸ ಬಹುದು ಎಂಬಂತಿತ್ತು. ಕ್ರಿಮಿಕೀಟಗಳ ವಿಷಣ್ಣ ಗಭೀರ ಧ್ವನಿಯೂ ಕೂಡ ಮೌನವನ್ನು ಮತ್ತಿನಿತು ಕಣಕಿ ರೇಗಿಸುವಂ ತಿತ್ತು. ಬಹುದೂರ ಕೆಳಗಡೆ ನಮ್ಮ ಮನೆಯಲ್ಲಿ ಬಗುಳುವ ನಾಯಿಯ ಕೂಗಿನಿಂದ ಮೌನ ಮಿಂಚಿದಂತಾಗುತ್ತಿತ್ತು. ದೂರ ಬಯಲಿನಲ್ಲಿ ಇರುಳ್ವಕ್ಕಿಯೊಂದರ ವಿಕಟ ನಿರ್ಘೋಷ ಕರ್ಕ ಶವಾಗಿ ಕೇಳಿಬಂದು ಭಯವನ್ನು ಭಯಂಕರವನ್ನಾಗಿ ಮಾಡು ತ್ತಿತ್ತು. ಒಂದೊಂದು ಸಾರಿ ಕಣ್ಣಿಗೆ ಏನೇನೋ ವಿಕಾರ ಸ್ವರೂ ಪಗಳು ಕಾಣಿಸಿದಂತಾಗಿ ಪುನಃ ಕತ್ತಲಲ್ಲಿ ಕರಗುತ್ತಿದ್ದುವು. ಕೋವಿಗೆ ಪುನಃ ತೋಟಾಗಳನ್ನು ಹಾಕಿ ತುಸು ಹೊತ್ತು ಕುಳಿ ತುಕೊಂಡೆ. ಆ ಕತ್ತಲಲ್ಲಿ, ಮೌನದಲ್ಲಿ ಮೂರ್ಛೆ. ಹೋಗಿದ್ದ ವನಪ್ರದೇಶವನ್ನು ಶೂನ್ಯದೃಷ್ಟಿಯಿಂದ ನೋಡಿ ನೋಡಿ ನನಗೂ ಬೇಸರವಾಯಿತು; ತಲೆ ಚಿಟ್ಟು ಹಿಡಿಯಿತು; ತುಂಬಾ ರೇಜಿಗೆಯಾಯಿತು. ಚಂದ್ರ ಮೂಡುವವರೆಗೆ ಸ್ವಲ್ಪ ಮಲಗುವೆ ನೆಂದು ಬಗೆದು, ಕೋವಿಯನ್ನೇ ತಲೆದಿಂಬನ್ನಾಗಿ ಮಾಡಿಕೊಂಡು ಕಂಬಳಿಯನ್ನು ಮೈಮೇಲೆ ಎಳೆದುಕೊಂಡು ಮಲಗಿದೆ, ಹಾಗೆಯೇ ಜೊಂಪು ಹತ್ತಿತು.

ತುಸುಹೊತ್ತಿನಲ್ಲಿಯೇ ಯಾವುದೋ ಒಂದು ಸದ್ದಿನಿಂದ ಎಚ್ಚರವಾಯಿತು. ಮಲಗಿದ್ದ ಹಾಗೆಯೇ ಕಣ್ದೆರೆದೆ ಅದೇ ಕಗ್ಗತ್ತಲೆ; ಕಣ್ಣೊರೆಯುವಂತಿತ್ತು. ಅದೇ ಮೌನ; ಮೂರ್ಛೆಗೊಳಿಸುವಂತಿತ್ತು. ಕಿವಿಗೊಟ್ಟು ಆಲಿಸಿದೆ. ನಾನು ಕುಳಿತಿದ್ದ ಮರದ ಬುಡದಲ್ಲಿ ಏನೋ ಸರಸರ ಸದ್ದಾದಂತಾಯಿತು. ಒಡನೆಯೇ ಭಯಂಕರವಾದ ಹೊಂಕೃತಿಗಳು ಕತ್ತಲೆಯ ಕಡಲಿನಲ್ಲಿ ತರಂಗತರಂಗವಾಗಿದ್ದುವು. ಮೊದಲು ನನಗೆ ಪ್ರಾಣಿ ಯಾವುದೆಂದು ಬಗೆಹರಿಯಲಿಲ್ಲ. ರಕ್ತನಾಳಗಳಲ್ಲಿ ಉದ್ವೇಗದ ಪ್ರವಾಹ ಸಂಚರಿಸಿತು. ಮೆಲ್ಲನೆ, ಬಹಳ ಜಾಗರೂಕತೆಯಿಂದ ಸ್ವಲ್ಪವೂ ಸದ್ದುಮಾಡದೆ ಅಟ್ಟಣೆಯಲ್ಲಿ ಎದ್ದು ಕುಳಿತುಕೊಂಡೆ. ಹಾಗೆಯೇ ಬಂದೂಕನ್ನು ಕೈಲಿ ತೆಗೆದುಕೊಂಡೆ. ಪ್ರಾಣಿ ಮಾವಿನ ಹಣ್ಣನ್ನು ಅಗಿಯುವ ಸದ್ದಾಯಿತು. ನೆಲವನ್ನು ಮೂತಿಯಿಂದ ಉಳುವ ಸದ್ದಾಯಿತು. ಜಂತು ವನವರಾಹವೆಂದು ನಿರ್ಧರಿಸಿದೆ. ಅದರ ಆಟೋಪದಿಂದ ಬಹು ದೊಡ್ಡ ಪ್ರಾಣಿಯಾಗಿರಬೇಕೆಂದೂ ಊಹಿಸಿದೆ. ನನಗೂ ಅದಕ್ಕೂ ಇಪ್ಪತ್ತು ಅಡಿಗಳ ದೂರವಿರಬೇಕೆಂದು ನಿರ್ಣಯಿಸಿದೆ. ಏಕೆಂದರೆ, ನಾನು ಕುಳಿತ ಅಟ್ಟಣೆ ಸುಮಾರು ಮೂವತ್ತು ಮೂವತ್ತೈದು ಅಡಿಗಳಷ್ಟು ಎತ್ತರವಿದ್ದರೂ ಬೆಟ್ಟ ಇಳಿಜಾರಾಗಿದ್ದುದರಿಂದ ಓರೆಯಲ್ಲಿ ಮೇಯುತ್ತಿದ್ದ ಸೂಕರ ನಿಕಟಸ್ಥವಾಗಿಯೇ ಇತ್ತು. ನನಗಿದ್ದ ನಯನೇಂದ್ರಿಯ ಶಕ್ತಿಯನೆಲ್ಲ ಉಪಯೋಗಿಸಿ ಸದ್ದಾಗುತ್ತಿದ್ದ ಕಡೆಗೆ ನೋಡಿದೆ ಘನೀಭೂತವಾದ ಘೋರಾಂಧಕಾರ ಕಾಳಪಾಷಾಣಭಿತ್ತಿಯೋಪಾದಿಯಲ್ಲಿ ನನ್ನೆದುರು ನಿಂತಿತ್ತು. ವಸ್ತುಮಾತ್ರವಾದರೂ ಗೋಚರಿಸಲಿಲ್ಲ.

ಮುಂದೇನು ಮಾಡುವುದೆಂದು ಯೋಚಿಸಿದೆ. ತಿಲಮಾತ್ರವಾದರೂ ಬೆಳಕಿದ್ದರೆ ಅನಾಯಾಸವಾಗಿ ಪ್ರಾಣಿಯನ್ನು ಸುಟ್ಟು ಬಿಡಬಹುದಾಗಿತ್ತು. ಎಲ್ಲಿಯಾದರೂ ಏನಾದರೊಂದು ಸೂಚನೆ

ಸಿಗಬಹುದೆಂದು ಹಾರೈಸಿ ಕಣ್ಣು ದಣಿಯುವಂತೆ ಈಕ್ಷಿಸಿದೆ. ಏನೂ ಪ್ರಯೋಜನವಾಗಲಿಲ್ಲ. ಹತಾಶನಾಗಿ ಕುಳಿತುಬಿಟ್ಟೆ. ಮನಸ್ಸಿನಲ್ಲಿಯೇ ಅಯ್ಯೋ ಎಂದುಕೊಂಡೆ. ತರುವಾಯ ಈ ರೀತಿ ಸಮಾಧಾನ ಮಾಡಿಕೊಂಡೆ. ಪ್ರಾಣಿ ಹಣ್ಣು ತಿನ್ನುತ್ತ ಇದ್ದರೆ ಸ್ವಲ್ಪಹೊತ್ತಿನಲ್ಲಿಯೇ ಚಂದ್ರೋದಯವಾಗುತ್ತದೆ. ಆಗ ಸುಲಭವಾಗಿ ಸುಡಬಹುದು, ಎಂದು ತುಸು ಹೊತ್ತು ಕಾದೆ. ಮನಸ್ಸು ತಾಳ್ಮೆಯಿಂದಿರಲಿಲ್ಲ. ಇದರರ್ಥವನ್ನು ಬೇಟೆಗಾರರು ಚೆನ್ನಾಗಿ ತಿಳಿಯಬಹುದು. ಕೈಯಲ್ಲಿ ಬಂದೂಕಿರುವಾಗ, ಜಂತು ಸಮೀಪದಲ್ಲಿರುವಾಗ, ಇಂದ್ರಿಯಗಳನ್ನೆಲ್ಲ ನಿಗ್ರಹಿಸಿದ ಎಂತಹ ತತ್ವಜ್ಞಾನಿಯಾದ ಬೇಟೆಗಾರನಾದರೂ ಕುದಿಯದಿರುವುದಿಲ್ಲ. ರಜೋಗುಣ ಉದ್ದೀಪನವಾಗಿ ವಿಲಯರುದ್ರಸ್ವಭಾವ ತಲೆದೋರುತ್ತದೆ. ಸಂಹಾರಲೋಲುಪತೆಯುಂಟಾಗುತ್ತದೆ. ಕಾರ್ಯಶಕ್ತಿ ಇಮ್ಮಡಿಸುತ್ತದೆ. ಧಮನಿಗಳಲ್ಲಿ ಭೈರವರಕ್ತಧ್ವನಿ ಬಿದಿಗಾಲದ ಹೆಬ್ಬುಲಿಯಂತೆ ತಾಂಡವವಾಡುತ್ತದೆ. ಮನುಷ್ಯ ಶ್ಮಶಾನದ ಕಾಪಾಲಿಕನಾಗುತ್ತಾನೆ. ಅಂತೂ ನನಗೆ ತಾಳ್ಮೆ ತಪ್ಪಿತು. ಸದ್ದು ಬರುವ ತಾವನ್ನು ಊಹಿಸಿ ಗುರಿಯಿಟ್ಟು ಈಡು ಹಾರಿಸುವೆನೆಂದು ನಿರ್ಣಯಿಸಿದೆ. ಮತ್ತೆ ಸ್ವಲ್ಪ ಅಳುಕಿದೆ. ಏಕೆಂದರೆ ಸರಿಯಾಗಿ ಪರೀಕ್ಷಿಸದೆ ಗುಂಡು ಹೊಡೆದು ಎಷ್ಟೋಜನ ಬೇಟೆಗಾರರು ಕೊಲ್ಲಬಾರದ ಜಂತುಗಳನ್ನೂ, ಗೋವುಗಳನ್ನೂ ಕೂಡ, ಹೊಡೆದುಬಿಟ್ಟಿದ್ದಾರೆ. ಅವನ್ನು ಯೋಚಿಸಿಕೊಂಡು ಸ್ವಲ್ಪ ಸುಮ್ಮನಾದೆ. ತಿಂಗಳು ಮೂಡುವ ಚಿಹ್ನೆಯಾದರೂ ಇದೆಯೋ ಎಂದು ಗಗನ ಪರ್ಯಂತವಾಗಿ ಮೇಲೇರಿದ ಗಿರಿಯನ್ನು ನೋಡಿದೆ. ಎಲ್ಲ ತಿಮಿರ ತಲ್ಲೀನವಾಗಿ ಹೋಗಿತ್ತು. ಅಷ್ಟರಲ್ಲಿ ಹಂದಿ ಗಾಳಿ ಹಿಡಿಯುವ ಸುದ್ದಿ ಕೇಳಿಸಿತು. ನಿಶ್ವಾಸೋಚ್ಛ್ವಾಸಗಳು ತಿದಿಯೊತ್ತಿದಂತೆ ಕೇಳಿಸಿದುವು. ಮನುಷ್ಯರ ವಾಸನೆ ಅವಕ್ಕೆ ಗೊತ್ತಾಯಿತೆಂದು ತೋರುತ್ತದೆ. ಒಂದೇ ಸಾರಿ ಹೂಂ

ಕಾರ ಮಾಡುತ್ತ ಗಿಡಮರಗಳನ್ನು ಮುರಿಮುರಿದು ಬೆಟ್ಟದ ನೆತ್ತಿಯಿಂದ ತಪ್ಪಲಿಗುರುಳುವ ಹೆಬ್ಬಂಡೆಯಂತೆ ಆ ವನಸೂಕರವು ಧಡಧಡ ಎಂದು ಧಾವಿಸಿ ಬಿಟ್ಟಿತು. ಅದು ಅಡಿಯಿಟ್ಟ ರಭಸಕ್ಕೆ ಕಾಡುಗುಡ್ಡವೆಲ್ಲ ವಿಕಂಪಿಸಿದಂತಾಯಿತು. ಸದ್ದು ಬರುಬರುತ್ತ ದೂರವಾಗಿ, ಮರಳಿ ಬನದಿರುಳು ಸದ್ದಿಲಿಯಾಯಿತು.

ನಾನು ಸುಮ್ಮನೆ ಕಲ್ಲಾಗಿ ಕುಳಿತುಬಿಟ್ಟೆ. ದೂರದಿಂದ ಗೂಬೆಯ ಕೀಚುದನಿಯೊಂದು ಸ್ಮಶಾನ ಪ್ರೇತದ ಕರ್ಕಶ ವಿಕಟ ಧ್ವನಿಯಂತೆ ಕೇಳಿ ಬಂತು. ದೂರದಲ್ಲಿ ಗ್ರಾಮಶುನಕಕಂಠನಿರ್ಘೋಷಣ ಕತ್ತಲೆಗೆ ಕಲ್ಲಿಸೆಯುತ್ತಿತ್ತು. ಎಲ್ಲವೂ ಏನೋ ಒಂದು ಭೀಷಣರಹಸ್ಯವಾಗಿದ್ದಂತೆ ಭಾಸವಾಯಿತು. ನನಗೆ ಬಂದಿದ್ದ ನಿದ್ದೆಯೆಲ್ಲ ಪಲಾಯನವಾಯಿತು. ಸುಮ್ಮನೆ ಶೂನ್ಯಮನಸ್ಕನಾಗಿ ಕುಳಿತೆ. ಆಲೋಚಿಸುವುದಕ್ಕೂ ಕೂಡ ಹೆದರಿಕೆಯಾಯಿತು. ಪಿಶಾಚಿಯನ್ನು ನೆನೆನೆದು, ಹೊದಿಕೆಯೊಳಗೆ ಹುದುಗಿ, ಮೈ ಅಲ್ಲಾಡಿದರೆ ಎಲ್ಲಿ ದೆವ್ವಕ್ಕೆ ನಾನಿರುವುದುಗೊತ್ತಾಗಿ ಬಿಡುವುದೋ ಎಂದು ಹೆದರಿ ಸುಮ್ಮನೆ ಬೆವರುತ್ತ ಮಲಗುವ ಮಗುವಿನಂತೆ ಕುಳಿತುಬಿಟ್ಟೆ.

ಕುರುಡು ಕಗ್ಗತ್ತಲೆ; ಭೀಷಣ ನೀರವತೆ. ಸ್ವಲ್ಪ ಹೊತ್ತಾಯಿತು. ಇನ್ನೂ ಸ್ವಲ್ಪ ಹೊತ್ತಾಯಿತು. ಮತ್ತೂ ಸ್ವಲ್ಪ ಹೊತ್ತಾಯಿತು. ಕಾಲದ ನಡಿಗೆಯ ಸಪ್ಪಳ ಕೇಳಿಸುವಂತಿತ್ತು. ನೋಡುತ್ತಿದ ಹಾಗೆಯೇ, ಇರುಳುಕಂಡ ಬೆಳಕಿನ ಕನಸಿನಂತೆ ಮೂಡಣ ಬಾನೆಡೆಯಲ್ಲಿ ಏನೋ ಒಂದಿನಿತು ಹೊಳಪು ಮೈದೋರಿತು. ತಿಂಗಳು ಮೂಡಿಬರುವನೆಂದು ನನ್ನೆದೆ ಹಿಗ್ಗಿತು. ಆ ಮೌನ ತಿಮಿರಗಳ ಗುರುಭಾರದಿಂದ ಕುಗ್ಗಿ ನೆಲಸಮವಾಗಿದ್ದ ಮನಸ್ಸು ಟೊಂಕಸಿರೆಳೆದು. ನಸು ತಲೆಯೆತ್ತಿತು. ನೋಡುತ್ತಿದ್ದ ಹಾಗೆಯೇ, ಕನಸು ನನೆಕೊನೆಯೇರಿತು. ಕಾಂತಿ ಹೆಚ್ಚಿತು. ಹೊಂಬಣ್ಣವಾಯಿತು. ಬಣ್ಣಕ್ಕೆ ಬಣ್ಣವೇರಿತು, ಪರ್ವತಶಿಖರಶಿರೋರೇಖೆಯಲ್ಲಿ

ಬೆಳೆದಿದ್ದ ಭೀಮಭೂರುಹರಾಜಿಗಳು ಜ್ಯೋತ್ಸ್ನಾ ಪ್ರದೀಪ್ತವಾದ ನೀಲಾಕಾಶಪಟವಲ್ಲಿ ಚಿತ್ರಿತವಾದಂತೆ ತೋರಿದುವು. ಉತ್ಕಂಠಿತ ಭಾವದಿಂದ ಅತ್ತಕಡೆ ಉನ್ಮೀಲಿತನಯನನಾಗಿ ದೃಷ್ಟಿಸಲಾರಂಭಿಸಿದೆ. ದೃಶ್ಯ ಅತ್ಯಂತ ರಮಣೀಯವಾಗಿತ್ತು! ಬೇಟೆಗಾರ ಕಬ್ಬಿಗನಾಗಿ ನೋಡಿದನು. ಮೆಲ್ಲ ಮೆಲ್ಲನೆ ಕತ್ತಲು ಹಿಂಜರಿಯತೊಡಗಿತು. ನೋಡುತಿದ್ದ ಹಾಗೆಯೇ ಪೂರ್ವಾಕಾಶ ಇನ್ನೂ ಪ್ರಕಾಶಮಾನವಾಯಿತು. ಶೀತಲಚಂದ್ರಕಿರಣಸ್ನಾತ ಶ್ವೇತೋರ್ಣಸದೃಶ್ಯಖಂಡ ನೀರದಗಳು ನಭೋ ಮಧ್ಯದಲ್ಲಿ ಮೆರೆದುವು. ಸ್ವಲ್ಪ ಹೊತ್ತಿನಲ್ಲಿಯೇ ಆಕಾಶಪಟಸ್ಥ ಸ್ವಲ್ಪವಿರಳವೃಕ್ಷಮಾಲೆಗಳ ಹಿಂಗಡೆಯಲ್ಲಿ ಸುಂದರ ಶಶಾಂಕನು ಗೋಚರವಾದನು. 'ಜೋನ್ನದ ಬಣ್ಣದಿ ತುಂಬಿದ ಬಿಂಬಿದ ಹೊನ್ನಿನ ಸೊನ್ನೆಯು ಮೂಡಿದುದು.' ಹೊಂಗದಿರುಗಳು ಒಯ್ಯೊಯ್ಯನೆ ಅರಣ್ಯಪ್ರವೇಶ ಮಾಡಿದುವು. ಕತ್ತಲು ನಿಬಿಡ ವೃಕ್ಷವಾಟಿಕೆಗಳಲ್ಲಿ ಅವಿತುಕೊಂಡಿತು. ಆದರೆ ಮೌನ ಎಂದಿನಂತೆ ಗಂಭೀರವಾಗಿತ್ತು. ಚಂದ್ರ ಆಕಾಶ ಮಾರ್ಗದಲ್ಲಿಡುವ ಹೆಜ್ಜೆಗಳ ಸದ್ದು ಕೂಡ ಕೇಳಿಸುವಂತಿತ್ತು. ಘೋರ ವಿಷಣ್ಣಳಾಗಿದ್ದ ನಿಶಾವನಿತೆ ಮಧುರಪ್ರಸನ್ನಳಾದಳು. ರುದ್ರವಾಗಿದುದೆಲ್ಲ ರಮಣೀಯವಾಯ್ತು. ಚಂದ್ರ ಮೇಲೇರಿದನು. ಗಿರಿಶಿಖರವನ್ನು ದಾಟಿ ಬಂದನು. ಗಗನದಿಂದ್ಯೈತರುವ ಜ್ಯೋತ್ಸ್ನಾ ತುಷಾರವೃಷ್ಟಿ ಹೆಣೆದುಕೊಂಡಿದ್ದ ಶ್ಯಾಮಲಪರ್ಣಾರ್ಣವವನ್ನು ಸ್ವರ್ಣವರ್ಣಮಯವನ್ನಾಗಿ ಮಾಡಿ ಸಂದುಗೊಂದುಗಳಲ್ಲಿ ತೂರಿಕೊಂಡು ಬಂದು ಬನದ ಸಣ್ಣಪುಟ್ಟ ಗಿಡಬಳ್ಳಿ ಹೊದರುಗಳ ಮೇಲೆ ಮಲಗಿತು. ಬೆಳ್ದಿಂಗಳ ಸೋನೆ ಎಡೆಬಿಡದೆ ಸುರಿಯಿತು. ಮರದ ನೆರಳುಗಳು ಮಾತ್ರ ಕತ್ತಲೆಗೆ ಆಶ್ರಯಸ್ಥಾನಗಳಾದವು. ಅಲ್ಲಿಯೂ ಕೂಡ ಅವಿತುಕೊಂಡಿದ್ದ ಕತ್ತಲೆಯನ್ನು ಕಂಡುಹಿಡಿಯಬಹುದಾಗಿತ್ತು. ಜಗತ್ತೆಲ್ಲ ಚಿತ್ರೀಭೂತವಾದ್ದ ಮಧುರ ಕವನದಂತಿತ್ತು

ಪ್ರಕೃತಿ ಉಪಾಸಕನಾಗಿದ್ದ ನಾನು ಸೌಂದರ್ಯೋಪಾಸನೆಗೆ ತೊಡಗಿದೆ. ಬೇಟೆಗಾರನಿಗೆ ಬೇಟೆಯಾಗದಿದ್ದರೂ ಕಬ್ಬಿಗನಿಗೆ ಬೇಟೆಯಾಯಿತು ಎಂದುಕೊಂಡೆ. ಕೋವಿಯನ್ನು ತೊಡೆಯ ಮೇಲೆ ಇಟ್ಟುಕೊಂಡು ಬಿಡುಗಣ್ಣನಾಗಿ ನೋಡತೊಡಗಿದೆ. ಅವ್ಯಕ್ತದ ಅಂತಃಕರಣಮೂರ್ತಿಯಾಗಿರುವ ರತಿ ತನ್ನ ಅನಂತ ಐಶ್ವರ್ಯವನ್ನು ಮುಕ್ತಹಸ್ತೆಯಾಗಿ ಚೆಲ್ಲಿ ಬೀಸಿದ್ದಳು. ಸೊಬಗು ಸೂರೆಯಾಗಿತ್ತು. ಆದರೆ ಪ್ರೇಕ್ಷಕರಾರು? ಶತಮಾನಗಳಿಂದ ಇದೇ ರೀತಿಯಲ್ಲಿ ಸೊಬಗು ಸೂರೆಯಾಗುತ್ತಿರುವುದು! ಎಷ್ಟು ಜನ ನೋಡಿ ಅನುಭವಿಸಿದಾರೆ? ಈ ಕಾಡಿನ ಬೆಳ್ದಿಂಗಳು ಎನಿತೆದೆಗಳನ್ನು ವಿಕಾಸಗೊಳಿಸಿರುವುದು? ಈ ವಿಪಿನಚಂದ್ರಿಕೆ ಯಾರ ಆಹ್ಲಾದಕ್ಕಾಗಿ ಇಂತು ದಿನದಿನವೂ ಬೇಸರವಿಲ್ಲದೆ ನಲಿಯುವದು? ಬಹುಶಃ ನನ್ನ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದಿರಬಹುದೆ? ಇವರ ತಪಸ್ಸು ಇಂದು ಫಲಿಸಿತೇ? ಇನ್ನು ಮುಂದೆ ಹೀಗಿರುವುದಿಲ್ಲವೇ? ಹೀಗೆಲ್ಲ ಆಲೋಚಿಸಿದೆ. ತರುವಾಯ ಕಾವ್ಯಗಳಲ್ಲಿ ಓದಿದ್ದ ಚಂದ್ರೋದಯಗಳ ವರ್ಣನೆಗಳನ್ನು ನೆನೆದು ವಿಮರ್ಶಿಸಿದೆ. ಮಾತಿನ ಮಂಕುತನವು ಮೇಲೆದ್ದು ತೋರಿತು. ಕಬ್ಬಿಗಳ ಬಡತನವು ಎದೆಯಲ್ಲಿ ಒಂದು ವಿಧವಾದ ನೋವನ್ನುಂಟು ಮಾಡಿತು. ಈ ಚಂದ್ರೋದಯದ, ಈ ವಿಪಿನಗಳ, ಈ ಚಂದ್ರಿಕೆಯ, ಈ ದೃಶ್ಯದ ವರ್ಣನೆಮಾಡಲೆಳಸುವವನೇ ಹುಚ್ಚ; ಮಾಡಿದರೂ ಸಂಪೂರ್ಣವಾಗಿ ಬಣ್ಣಿಸಿಬಿಟ್ಟೆನೆಂದುಕೊಳ್ಳುವವನು ಶುದ್ಧ ಮೂರ್ಖ! ಹೀಗೆಲ್ಲ ಯೋಚಿಸಿದೆ. ತರುವಾಯ ಈ ಮಲೆನಾಡಿನ ಕಾಡುಗಳ ಸಿರಿಯನ್ನು ಅನುಭವಿಸಿದ ಬಯಲುಸೀಮೆಯವರ ಎದೆಯ ಬಡತನವನ್ನು ನೆನೆದು ಮರುಗಿದೆ. ಹೀಗೆಲ್ಲ ಯೋಚಿಸಿದೆ. ಆಲೋಚನೆಗಳಿಗೆ ಒಂದು ಕಟ್ಟು, ಒಂದು ಎಲ್ಲೆ, ಒಂದು ನಿಯಮ, ಒಂದೂ ಇರಲಿಲ್ಲ.

ತಂಗಾಳಿ ಕುಳಿರ್ಗಾಳಿಯಾಗಲಾರಂಭಿಸಿತು. ಜೊನ್ನದ ಸೋನೆಯೊಂದಿಗೆ ಇಬ್ಬನಿಯ ಸೋನೆಯೂ ಒಯ್ಯೊಯ್ಯನೆ ಇಳಿಯ

ತೊಡಗಿತು. ಗಗನದಲ್ಲಿ ತುಂಡುಮೋಡಗಳು ತುಂಟ ಹುಡುಗ ರಂತೆ ತಿಂಗಳನ್ನು ಸುಮ್ಮನೆ ಕಾಡುತ್ತಿದ್ದವು. ಅವುಗಳ ಕಾಟ ದಿಂದ ಬೆಳ್ದಿಂಗಳು ಒಮ್ಮೆ ಮಬ್ಬಾಗಿ ಒಮ್ಮೆ ಬೆಳಗುತ್ತಿತ್ತು. ಬೆಳಕು ಹೆಚ್ಚು ಕಡಿಮೆಯಾಗುತ್ತಿದ್ದುದರಿಂದ ನಿಶ್ಚಲವಾದ ಕಲ್ಲು ಗಿಡ ಹೊದರುಗಳು ಹಿಂದಕ್ಕೂ ಮುಂದಕ್ಕೂ ಚಲಿಸಿದಂತಾಗುತ್ತಿತ್ತು. ಆ ಚಲನೆಗೆ ಮನಸ್ಸು ಆವರಣವಿಕ್ಷೇಪಶಕ್ತಿಗಳು ರೂಪಗ ಳನ್ನು ಕಲ್ಪಿಸುತ್ತಿದ್ದುವು. ನಾನೂ ಮೋಹಿತನಾಗಿ ಎರಡು ಮೂರು ಸಾರಿ ಯಾವದೋ ಪ್ರಾಣಿಯೋ ಇರಬೇಕೆಂದು ಭಾವಿಸಿ ಕೋವಿ ಯನ್ನೆತ್ತಿ ಗುರಿಯಿಟ್ಟೆ. ಆದರೆ ಮೋಸಹೋಗಲಿಲ್ಲ. ಬೇಗನೆ ಮಾಯೆಯ ಗುಟ್ಟು ಗೊತ್ತಾಗಿ ಹೋಯಿತು. ಆಮೇಲೆ ಕಣ್ಣು ಏನೇನೋ ಮಾಯಾ ರೂಪಗಳನ್ನು ಕಾಣುತ್ತಿತ್ತು. ಆದರೆ ಮನಸ್ಸು ಅವುಗಳೆಲ್ಲವನ್ನೂ ಖಂಡಿಸಿ ಬಿಡುತ್ತಿತ್ತು. ಹೀಗೆಯೇ ಬಹಳ ಹೊತ್ತು ಕುಳಿತು ಕಾದೆ. ಎಲ್ಲ ನೀರವವಾಗಿತ್ತು; ಎಲ್ಲ ರಮಣೀಯ ವಾಗಿತ್ತು; ಯಾವದೊಂದು ಜೀವ ಜಂತುವೂ ಸಂಚರಿಸುವ ಚಿಹ್ನೆ ತೋರಲಿಲ್ಲ. ಹಾಗೆಯೇ ಕೋವಿಯನ್ನು ತಲೆದಿಂಬು ಮಾಡಿ ಕೊಂಡು, ಕಂಬಳಿಯನ್ನು ಹೊದೆದುಕೊಂಡು, ಅಂಗಾತನೆ ಮಲಗಿ, ಅನಂತಾಕಾಶದಲ್ಲಿ ಸ್ವರ್ಣಜ್ಯೋತಿರ್ಮಯ ಬಿಂಬದಿಂದ ರಂಜಿಸು ತ್ತಿದ್ದ ಸ್ನಿಗ್ಧೋಜ್ಜ್ವಲಜ್ಯೋತ್ಸ್ನೆಯನ್ನು ಕಣ್ಣಿನಿಂದ ಕುಡಿಯ ತೊಡಗಿದೆ. ಕುಡಿದು ಕುಡಿದು ಮತ್ತೇರಿ ಕಣ್ಣು ಮುಚ್ಚಿ ನಿದ್ದೆ ಹೋದೆ.

ಎಷ್ಟು ಹೊತ್ತು ನಿದ್ದೆಮಾಡಿದೆನೋ ತಿಳಿಯದು ಇದ್ದ ಕ್ಕಿದ್ದ ಹಾಗೆ ನಿದ್ರಾಭಂಗವಾಯಿತು. ಕಾನನದ ನೀರವತೆಯನ್ನು ಆಲೋಚಿಸಿಕೊಂಡು ಈಡಿನ ಢಂಕಾರವೊಂದು ಸುತ್ತುಮುತ್ತಲಿದ್ದ ಪರ್ವತಕಂದರಗಳಿಂದ ಪ್ರತಿಧ್ವನಿತವಾಗಿ ಮರಳಿ ಮೌನದಲ್ಲಿ ಮುಳುಗಿ ಹೋಯಿತು ಅರಣ್ಯ ಶ್ರೇಣಿಗಳು ಕಂಪಿಸಿದುವು. ನನ್ನ ಅಟ್ಟಣೆಯಿಂದ ಒಂದೇ ನೂರು ದೂರದಲ್ಲಿದ್ದ ಮುತ್ತು

ಗದ ಮರದೆಲೆಗಳಲ್ಲಿ ಪಟಪಟ ಧ್ವನಿಯಾಯಿತು. ಕೋವಿಯಿಂದ ಸಿಡಿದ ದೊಡ್ಡ ಚರೆಗಳು ಮೃತ್ಯುವೇಗದಿಂದ ಧಾವಿಸಿದುವೆಂದು ಗೊತ್ತಾಯಿತು. ಗಾಬರಿಯಿಂದ ಎದ್ದು ಕುಳಿತೆ. ಮಂಕು ಹಿಡಿದವನಂತೆ ಸುತ್ತಲೂ ಮಿಳ್ಮಿಳನೆ ನೋಡಿದೆ. ಅದೇ ಬೆಳ್ದಿಂಗಳು; ಅದೇ ಸದ್ದಿಲಿಯಿರುಳು; ಅದೇ ನಿಬಿಡ ಕಾನನ; ಅದೇ ಹೆಮ್ಮರಗಳು; ಅದೇ ಛಾಯೆಗಳು; ಅದೇ ಬೆಳ್ಮುಗಿಲು; ಅದೇ ಇಬ್ಬನಿ ಸೋನೆ. ಝಂಕಾರ ಮಾತ್ರ ಎಲ್ಲಿಂದಲೋ ಬಂದು ಎಲ್ಲಿಯೋ ಹೋಯಿತು. ಉದ್ವೇಗದಿಂದ ಬೆವರಿದೆ. ಚರೆಗಳು ಒಂದು ಮಾರು ಈ ಕಡೆ ಬಂದಿದ್ದರೆ ನನ್ನಗತಿ ಏನಾಗುತ್ತಿತ್ತು ಎಂದು ಚಿಂತಿಸತೊಡಗಿದೆ. ಎಲ್ಲಿಯಾದರೂ ನನಗೆ ಬಡಿದುವೋ ಏನೋ ಎಂದು ಮೈಮುಟ್ಟಿ ನೋಡಿಕೊಂಡೆ. ಏಕೆಂದರೆ, ಪ್ರಾಣಿಗೆ ಗುಂಡು ಬಡಿದಕೂಡಲೆ ಅದರ ಅನುಭವವಾಗವದಿಲ್ಲ; ಸ್ವಲ್ಪ ಹೊತ್ತಾದಕೂಡಲೇ ಗೊತ್ತಾಗುತ್ತದೆ ಎಂಬುದನ್ನು ಹಿರಿಯರಿಂದ ಕೇಳಿ ತಿಳಿದಿದ್ದೆ. ಎಲ್ಲಯೂ ನನಗೆ ತಗುಲಿದಂತೆ ತೋರಲಿಲ್ಲ. ಅಂತೂ ಎದೆಯ-ಬಡಿತ ನಿಲ್ಲಲಿಲ್ಲ. ದಿಕ್ಕು ಕೆಟ್ಟವನಂತೆ ಕುಳಿತುಬಿಟ್ಟೆ. ಯಾವ ಆಲೋಚನೆಯೂ ಮನಸ್ಸಿಗೆ ಹೊಳೆಯಲಿಲ್ಲ. ಸ್ವಲ್ಪ ಹೊತ್ತಾದಮೇಲೆ ಸಮಾಧಾನ ತಂದುಕೊಂಡು ವಿಚಾರ ಮಾಡಲಾರಂಭಿಸಿದೆ. ಈಡನ್ನು ಹೊಡೆದವನು ಓಬುವಾಗಿರಬೇಕು, ಇಲ್ಲದಿದ್ದರೆ ತಿಮ್ಮ ಬುದ್ಧಿಯಿಲ್ಲದೆ ನನ್ನ ಕಡೆ ಏಕೆ ಹೊಡೆದರು? ಯಾವ ಪ್ರಾಣಿಗೆ ಹೊಡೆದದ್ದು? ಕಾಡಿನ ಮಧ್ಯೆ ಮರಸಿಗೆ ಕೂತಾಗ ಒಬ್ಬರನ್ನೊಬ್ಬರು ಕರೆಯಬಾರದೆಂದು ಬೇಟೆಯ ಕಟ್ಟು. ಆದರೂ ಕರೆದು ನಿಜವನ್ನು ಕೇಳಿ ತಿಳಿಯಬೇಕೆಂದು ನಿರ್ಧರಿಸಿದೆ. ಇನ್ನೇನು ಕರೆಯಬೇಕು, ಅಷ್ಟರಲ್ಲಿ ಬಳಿಯ ಪೊದೆಯಲ್ಲಿ ಏನೋ ಏಟುಬಿದ್ದ ನೋವಿನಿಂದ ಒದ್ದಾಡಿಕೊಳ್ಳುವಂತೆ ಸದ್ದಾಯಿತು. ಆಲಿಸಿದೆ. ಹೌದು! ಗುಂಡಿನೇಟು ಬಿದ್ದ ಜೀವಿಯೇ ಇರಬೇಕು ಎಂದು ಗೊತ್ತು ಮಾಡಿ, ಕರೆಯು

ವುದು ತರವಲ್ಲ ಎಂದುಕೊಂಡೆ. ಏಕೆಂದರೆ, ಗಾಯವಾದ ಜೀವಿ ಹುಲಿ ಚಿರತೆಗಳಲ್ಲಿ ಯಾವುದಾದರೂ ಆಗಿದ್ದರೆ ನಾನು ಕುಳಿತ ಸ್ಥಳ ಗೊತ್ತಾಗಿ, ಮೇಲೆ ನೆಗೆಯಬಹುದು. ಹೀಗೆಂದು ಸುಮ್ಮನಾದೆ. ಸ್ವಲ್ಪ ಕಾಲವಾದ ತರುವಾಯ ಸದ್ದು ನಿಂತಿತು. ಪ್ರಾಣಿ ಸತ್ತು ಹೋಯಿತೆಂದು ಊಹಿಸಿದೆ. ಆದರೂ ಕರೆಯಲು ಧೈರ್ಯವಾಗಲಿಲ್ಲ. ಅಷ್ಟರಲ್ಲಿಯೇ ಪ್ರಭಾತ ಸೂಚಕವಾದ ಪುಣ್ಯ ಸಮೀರ ತಣ್ಣನೆ ಬೀಸುತ್ತಿದ್ದುದರಿಂದಲೂ, ಚಂದ್ರ ಪಶ್ಚಿಮ ದಿಗಂತಾಭಿಮುಖನಾಗಿದ್ದುದರಿಂದಲೂ ಬೇಗ ಬೆಳಗಾಗುವುದೆಂದು ಬಗೆದು ಸುಮ್ಮನಾದೆ. ಒರಬರುತ್ತಾ ಇಬ್ಬನಿಯ ಸೋನೆ ಪ್ರಬಲವಾಯಿತು. ಬೆಟ್ಟಗಳು ಸಸು ಮಬ್ಬಾಯಿತು. ಚಂದ್ರನು ಒಂದಿಸಿತು ಕಾಂತಿಹೀನನಾದನು. ಮರದೆಲೆಗಳಿಂದ ಹನಿಗಳು ತಟ್ ಪಟ್ ಎಂದು ವಿಷಣ್ಣರವದಿಂದ ಬೀಳತೊಡಗಿದುವು. ನಕ್ಷತ್ರಗಳು ಮುಸುಕಿಬರುತ್ತಿದ್ದ ಬೆಳ್ಮಂಜಿನಲ್ಲಿ ಮುಚ್ಚಿಹೋದುವು. ಮುಗಿಲಿನಿಂದ ಜೊನ್ನದ ಸೋನೆಯೊಂದಿಗೆ ಹಿಟ್ಟಿನ ಸೋನೆಯೂ ಇಳಿದಂತಾಯಿತು. ದೂರ ಕಣಿವೆಯಲ್ಲಿ ಊರು ಕೋಳಿಗಳ ಕೂಗು ಕೇಳಿಸಿತು. ಜಗತ್ತಿನ ಉನ್ನಿದ್ರಾವಸ್ಥೆಯ ಸೂಚನೆ ತೋರಿಬಂದಿತು. ಕಂಬಳಿಯನ್ನು ಬಲವಾಗಿ ಸುತ್ತಿಕೊಂಡು ಕೋವಿ ಹಿಡಿದುಕೊಂಡು ಕುಳಿತೆ.



# ಪರಿಚಯ.

ಕುಪ್ಪಳ್ಳಿ ಪುಟ್ಟಪ್ಪ—ಮಲೆನಾಡಿನ ಸೃಷ್ಟಿ ಸೌಂದರ್ಯವನ್ನು ತಮ್ಮ ವಾಗ್ಯೆಂದ್ರಜಾಲಿನಲ್ಲಿ ಸೆರೆಹಿಡಿದ ಸುಪ್ರಸಿದ್ಧ ಕವಿ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. 'ಕಾನೂರ ಸುಬ್ಬಮ್ಮ ಹೆಗ್ಗಡತಿ' ಎಂಬ ಬೃಹತ್ ಕಾದಂಬರಿಯು ಇವರ ಶೈಲಿಗೆ ಸಾಕ್ಷಿ. 'ಸಣ್ಣ ಕತೆ,'ಯಲ್ಲಿಯೂ ಇವರದು ಪಳಗಿದ ಕೈ. ಇವರದು ಭಾವಕ್ಕೆ ತಕ್ಕ ಶೈಲಿ. ಅದು ಸಂಸ್ಕೃತ ಭೂಯಿಷ್ಠವಾದರೂ, ಲಲಿತ ಕನ್ನಡಕ್ಕೆ ಒಗ್ಗುವ ರೀತಿಯುದು.

'ಮಲೆನಾಡಿನ ಚಿತ್ರಗಳು' ಎಂಬ ಹೊತ್ತಿಗೆಯಿಂದ ಆಯ್ದುಕೊಂಡ ಭಾಗವಿದು. ಇಲ್ಲಿಯ ಕಾಡಿನ ವರ್ಣನೆ. ಬೆಳದಿಂಗಳ ವರ್ಣನೆ, ಎಲ್ಲವೂ ಯಥಾವತ್ತಾಗಿ ಕಾವ್ಯಮಯವಾಗಿ ಬಂದಿವೆ.

## ಅಭ್ಯಾಸ

೧ ನೀವು ನೋಡಿದ ಒಂದು ಕಾಡನ್ನು ವರ್ಣಿಸಿರಿ.

೨ ಓಬು, ತಿಮ್ಮು ಮೊದಲಾದವರು ರಾತ್ರಿ ಕಾಡಿಗೆ ಹೋದರೇಕೆ?

೩ ಕಾಡು ಅಂಧಕಾರದಲ್ಲಿ ಮತ್ತು ಬೆಳದಿಂಗಳಲ್ಲಿ ಹೇಗೆ ಕಂಡಿತು?

೪ ಕಾಡಿನಲ್ಲಿರುವ ಪ್ರಾಣಿಗಳು ಮತು ಪಕ್ಷಿಗಳು ಯಾವವು ?

೫ ಬೇಟೆಗಾರನು ಜೇಟೆ ಹಿಡಿಯಲು ಹೇಗೆ ಸಿದ್ಧನಾಗಬೇಕು ?

೬ ಚನ್ನಬಸವ ಪುರಾಣದಲ್ಲಿಯ ಚಂದ್ರೋದಯದ ವರ್ಣನೆಯನ್ನು ಓದಿರಿ.

೭ 'ನನ್ನ ರಾತ್ರಿಯ ಪ್ರವಾಸ' ಈ ವಿಷಯವನ್ನು ಕುರಿತು ನಿಬಂಧ ಬರೆಯಿರಿ.

# ನಮ್ಮ ಊರಿನ ಬಯಲಾಟ



ಒಂದು ದಿನ ನಮ್ಮ ಊರಿನ ಯಕ್ಷಗಾನ ಸಭೆಯವರು ಒಂದು ಆಟವನ್ನು ಆಡುವ ಏರ್ಪಾಡು ಮಾಡಿದರು. ಆಟ ಹರಿಶ್ಚಂದ್ರ ಕತೆ. ಆಡಿಸುವುದಕ್ಕೆ ಶಾಲು ಸಾಬಿಯೇ ಮುಖಂಡ. 'ಸಾಬನಿಗೂ ಭಾಗವತರ ಆಟಕ್ಕೂ ಯಾವ ಸಂಬಂಧ ?' ಎನ್ನಬೇಡಿ. ನಮ್ಮ ಊರಿನ ಸಾಬಿಯು ಊರಿನ ಎಲ್ಲಾ ಕೆಲಸಗಳಿಗೂ ಮುಖಂಡ. ರಥೋತ್ಸವದ ಕಾಲದಲ್ಲಿಯೂ, ಇತರ ಉತ್ಸವಗಳ ಕಾಲದಲ್ಲಿಯೂ, ಶಾಲುಸಾಬಿಯು ಬೆಳಗಿನಿಂದ ಸಾಯಂಕಾಲದ ವರೆಗೆ ದೇವಸ್ಥಾನದ ಬಳಿಯೇ ಓಡಾಡುತ್ತಾ ಇರುತ್ತಾನೆ. ದೇವರ ಉತ್ಸವಕ್ಕೆ ಬೇಕಾಗುವ ವಾಹನ ಮುಂತಾದವುಗಳನ್ನು ಕಟ್ಟುವುದರಲ್ಲಿ; ರಥವನ್ನು ಕಟ್ಟಿ ಅದನ್ನು ವಿಧವಿಧವಾದ ರೀತಿಯಿಂದ ಅಲಂಕರಿಸುವದರಲ್ಲಿ, ದೇವರಿಗೆ ಬೇಕಾದ ಹೂವು ಹಾರಗಳನ್ನು ತರಿಸಿ ಅಡ್ಡೆಕಾರರನ್ನು ಕರಸಿ ಉತ್ಸವವನ್ನು ಸಕಾಲದಲ್ಲಿ ಹೊರಡಿಸುವುದರಲ್ಲಿ, ಇವುಗಳಲ್ಲೆಲ್ಲಾ ಅವನು ಮುಖ್ಯ ಭಾಗವನ್ನು ವಹಿಸುತ್ತಾನೆ. "ಇದು ವಿಗ್ರಹಾರಾಧನೆ, ತಾನು ಮುಸಲ್ಮಾನ, ವಿಗ್ರಹಗಳನ್ನು ಕಂಡರೆ ತನಗೆ ಆಗದು," ಎಂಬ ಭಾವನೆ ಅವನಿಗೆ ಹೊಳೆದಿಲ್ಲ. ನಮ್ಮ ಊರ ಇತರರಿಗೂ ಆ ಭಾವನೆ ಹೊಳೆದಿಲ್ಲ. ಪ್ರತಿ ಉತ್ಸವದ ಮುಂದೆಯೂ ಕೆಂಪ

ಶಾಲನ್ನು ಹೊದೆದುಕೊಂಡು ಕೈಯಲ್ಲಿ ಬೆತ್ತವನ್ನು ಹಿಡಿದು ಕೊಂಡು, ಸಾಬಿಯು ತಿರುಗುತ್ತಿರುತ್ತಾನೆ. ಅವನ ಮಾತನ್ನು ಮೀರಲು ಯಾರಿಗೂ ಧೈರ್ಯವಿಲ್ಲ. ನಮ್ಮ ಊರ ಪಟೇಲರು ಎಷ್ಟು ಸಲ ಹೋಗಿ ಕರೆದರೂ ಬಾರದ ಅಡ್ಡೆಕಾರರು, ದೂರ ದಲ್ಲಿ ಸಾಬಿಯ ಶಾಲನ್ನು ಕಂಡ ಕೂಡಲೇ ಹೊರಟು ಬರುತ್ತಾರೆ.

ಸಾಬಿಯನ್ನು ನೋಡಿದರೂ ಹಾಗೆಯೆ ಭಯವುಂಟಾಗು ತ್ತದೆ. ಆಳು ಆರಡಿ ಎತ್ತರ, ವಿಶಾಲವಾದ ಎದೆ, ಶಕ್ತಿಯುಕ್ತ ವಾದ ಮಾಂಸ ಖಂಡಗಳಿಂದ ಕೂಡಿದ ಕೈ ಕಾಲು, ಪಶು ಶಕ್ತಿ ಯನ್ನು ತೋರಿಸತಕ್ಕ ಕಾಂತಿಯುಕ್ತವಾದ ಕಣ್ಣುಗಳು, ಅಗಲ ವಾದ ಹಣೆ, ಹುರಿಮಾಡಿದ ಮೀಸೆ, ಅಲ್ಲಲ್ಲಿ ನೆರೆತ ಕೂದಲು ಕಾಣುತ್ತಿರುವ ಗಡ್ಡ. ಅವನನ್ನು ಕಂಡರೆ ಹುಡುಗರು ಹೆದರು ತ್ತಾರೆ. ದೊಡ್ಡವರು ಅವನ ಮಾತಿಗೆ ಬೆಲೆ ಕೊಡುತ್ತಾರೆ. ನಮ್ಮ ಊರ ಪೇಟೆಯಲ್ಲಿ ಅವನೇ ಒಬ್ಬ ಪಾಳೆಯಗಾರ. ಯಾರಾರ ಮನೆಯಲ್ಲಿ ಏನೇನು ಕಲಹ ನಡೆಯುತ್ತದೆ, ಅಣ್ಣ ತಮ್ಮಂದಿರ ಜಗಳವೇನು, ದಾಯಾದಿಗಳ ಜಗಳವೇನು, ಎಲ್ಲಾ ಅವನಿಗೆ ಗೊತ್ತು. ಪೇಟೆಯಲ್ಲಿ ಒಂದು ವ್ಯಾಜ್ಯವನ್ನೂ ಅವನು ನ್ಯಾಯ ಸ್ಥಾನಕ್ಕೆ ಬಿಡುವಂತೆ ಇಲ್ಲ. ಎಲ್ಲಾ ದೂರೂ ಅವನ ಹತ್ತಿರ ಬರ ಬೇಕು. ನಿಷ್ಪಕ್ಷಪಾತ ದೃಷ್ಟಿಯಿಂದ ತೀರ್ಮಾನವಾಗಬೇಕು. ಈಗೀಗ ಜನರು ಕೋರ್ಟಿಗೆ ಹೋಗುವದಕ್ಕೆ ಪ್ರಾರಂಭಿಸಿದ್ದರೂ, ಅವನ ಮಾತನ್ನು ಮೀರುವ ಧೈರ್ಯ ಯಾರಿಗೂ ಇಲ್ಲ. ಸಾಬಿಯು ಈ ರೀತಿಯಾಗಿ ನಮ್ಮ ಊರಿನಲ್ಲಿ ನೂರಕ್ಕಿಂತ ಹೆಚ್ಚು ವ್ಯಾಜ್ಯ ಗಳನ್ನು ಎರಡು ಪಕ್ಷದವರಿಗೂ ಸಮರ್ಪಕವಾಗುವಂತೆ ತೀರ್ಮಾನ ಮಾಡಿದ್ದಾನೆ. ನಮ್ಮ ಊರಿನಲ್ಲಿ ನಿಷ್ಪಕ್ಷಪಾತತೆಗೂ ನ್ಯಾಯಕ್ಕೂ ಸಾಬಿಯ ಪಂಚಾಯ್ತಿ ಉದಾಹರಣೆಯಾಗಿದೆ.

ನಮ್ಮ ಭಾವನವರು ಕೋರ್ಟು ಕಛೇರಿ ಸ್ವಲ್ಪ ಮಟ್ಟಿಗೆ ಕಂಡವರು. ಅವರಿಗೆ ಶಾಲು ಸಾಬಿಯ ನ್ಯಾಯ, ಪಂಚಾಯ್ತಿ

ಗಳಲ್ಲಿ ಅಷ್ಟು ನಂಬಿಕೆಯಿಲ್ಲ. ಅವರು "ಸಾಬಿಯ ನ್ಯಾಯವೆಲ್ಲಾ ಬರಿಯ ಬುರಡೆಯ ನ್ಯಾಯ, ಅವರಿಗೇನು ಗೊತ್ತಿದೆ?" ಎನ್ನು ತ್ತಿದ್ದರು. ಒಂದುಸಲ ಅವರು ತಮ್ಮ ಅಭಿಪ್ರಾಯವನ್ನು ಬದಲಾಯಿಸಬೇಕಾದ ಪ್ರಸಂಗ ಬಂದಿತು ಪೇಟೆಯ ತಿಮ್ಮನಿಗೂ ಹನುಮನಿಗೂ ಕೆಲವು ದಿವಸಗಳಿಂದ ಒಂದು ಕುರಿಯ ವಿಷಯ ವಲ್ಲಿ ವ್ಯಾಜ್ಯ ನಡೆಯುತ್ತಿದ್ದಿತು. ಹನುಮನ ಒಂದು ಕುರಿಯು ಒಂದು ರಾತ್ರಿ ಎಲ್ಲೋ ತಪ್ಪಿಸಿಕೊಂಡ ಹೋಯಿತು. ಅದರ ಕೆಲಸ ತಿಮ್ಮನ ಮನೆಯವರು ಪೂರೈಸಿಬಿಟ್ಟರೆಂದು ಹನುಮನಿಗೆ ಅನುಮಾನ; ಅದಕ್ಕಾಗಿ ಅವರಿಬ್ಬರೂ ಬಹಳ ದಿವಸಗಳಿಂದ ಮನಸ್ತಾಪ. ಹನುಮನ ಮನೆಯಲ್ಲಿ ಒಂದು ಸಾಯುವಂತಹ ಕುದುರೆ ಇದ್ದಿತು. ಅದು ಒಂದು ರಾತ್ರಿ ಕೆರೆಯ ಬಯಲಿನಲ್ಲಿ ಜೊಂಡಿನ ನಡುವೆ ಸತ್ತುಹೋಯಿತು. ಹನುಮನು ತನ್ನ ಇಬ್ಬರು ಮಕ್ಕಳೊಂದಿಗೆ ಆ ಕುದುರೆಯ ನಾಲ್ಕು ಕಾಲುಗಳನ್ನೂ ಕಟ್ಟಿ, ತಿಮ್ಮನ ಹೊಲದೊಳಗೆ ತಂದು ಹಾಕಿ ಅದರ ಬಾಯಿಗೆ ಒಂದು ಗೋಣಿಯ ಚೀಲವನ್ನು ಸುತ್ತಿಹಗ್ಗದಿಂದ ಬಲವಾಗಿ ಬಿಗಿದು ನೋಡುವವರಿಗೆ ಅದನ್ನು ಉಸಿರು ಕಟ್ಟಿಸಿ ಕೊಂದು ಹಾಕಿರುವ ರೆಂದು ತೋರುವ ಹಾಗೆ ಮಾಡಿದನು. ಮರುದಿವಸ ಬೆಳಿಗೆ ಹನುಮನ ಕುದುರೆಯನ್ನು ತಿಮ್ಮನು ತನ್ನ ಹೊಲದಲ್ಲಿ ಬಾಯಿ ಕಟ್ಟಿ ಗುದ್ದಿ ಕೊಂದುಹಾಕಿರುವ ವರ್ತಮಾನ ಊರಲ್ಲೆಲ್ಲಾ ಹರ ಡಿತು. ಹನುಮನ ಕುರಿಗೂ ಇದಕ್ಕೂ ಜನರು ಹೇಗೆ ಹೇಗೊ ಗಂಟುಹಾಕಿ, ತಿಮ್ಮನು ಈ ಕೆಲಸ ಮಾಡಿದ್ದರೂ ಮಾಡಿರ ಬಹುದೆಂದು ಹೇಳತೊಡಗಿದರು.

ಸರಿ, ಶಾಲು ಸಾಬಿ ತಾನೇ ನಮ್ಮೂರಿನ ಧರ್ಮಾವ ತಾರ. ಅವನನ್ನು ತಿಮ್ಮನ ಹೊಲದ ಬಳಿಗೆ ಬರಹೇಳಿ ಕಳು ಹಿಸಿದೆವು. ನೋಡೋಣವೆಂದು ನಮ್ಮ ಭಾವನವರೂ ಬಂದರು. ಶಾಲು ಸಾಬಿಯು ಹನುಮನನ್ನೂ ತಿಮ್ಮನನ್ನೂ ವಿಚಾರಣೆ

ಮಾಡಿದನು. ಮೊದಲು ದಿವಸ ರಾತ್ರಿ ತನ್ನ ಕುದುರೆಯು ತಿಮ್ಮನ ಹೊಲದಲ್ಲಿ ಮೇಯುತ್ತಿದ್ದುದನ್ನು ತಾನು ನೋಡಿದೆನೆಂದು ಹನು ಮನು ಹೇಳಿದನು. ಶಾಲುಸಾಬಿಯು ಹೊಲವನ್ನೆಲ್ಲಾ ಚೆನ್ನಾಗಿ ಪರೀಕ್ಷಿಸಿ ನೋಡಿದನು. ಅಲ್ಲಿ ಕುದುರೆಯು ಹೊಲಕ್ಕೆ ಬಂದ ಹೆಜ್ಜೆಯ ಗುರುತು ತೋರಲಿಲ್ಲ. ಉಳಿದ ಕೆಲಸವನ್ನೆಲ್ಲಾ ಊಹ ನೆಯೇ ಮಾಡಿತು. ಶಾಲುಸಾಬಿಯು ಈ ವಿಷಯವನ್ನು ಅಲ್ಲಿ ನೆರದಿದ್ದವರಿಗೆಲ್ಲಾ ಹೇಳಿ, ಕುದುರೆಯು ಹೊಲಕ್ಕೆ ಬಂದು ಸಾಯ ಲಿಲ್ಲವೆಂದೂ, ಸತ್ತ ಮೇಲೆಯೇ ಹೊಲಕ್ಕೆ ಬಂದಿತೆಂದೂ ಹೇಳಿ ದನು. ಕೊನೆಗೆ ಹನುಮನು ತಾನು ಮಾಡಿದ ತಪ್ಪನ್ನು ಒಪ್ಪಿ ಕೊಂಡನು. ಹನುಮನಿಗೂ ಅವನ ಮಕ್ಕಳಿಗೂ ಅಂದಿನಿಂದ ನಮ್ಮ ಊರಿನವರು "ಸತ್ತ ಕುದರೆ ಹೊರುವವರು" ಎಂದು ಹೆಸರಿ ಟ್ಟಿದ್ದಾರೆ. ಅಲ್ಲಿಂದ ಈಚೆಗೆ ನಮ್ಮ ಭಾವನವರೇನೋ ಒಂದು ದಿವಸ ನನ್ನೊಂದಿಗೆ "ಪರವಾಯಿಲ್ಲಯ್ಯ. ಒಂದೊಂದು ಸಲ ಸಾಬಿಯು ಚನ್ನಾಗಿಯೇ ನ್ಯಾಯವನ್ನು ತೀರ್ಮಾನಿಸುತ್ತಾನೆ"— ಎಂಬುದಾಗಿ ಹೇಳಿದನು. ಸಾಬಿಯು ಇಂತಹ ಎಷ್ಟೋ ಸಂದಿಗ್ಧ ಪ್ರಶ್ನೆಗಳನ್ನು ಸಮರ್ಪಕವಾಗಿ ತೀರ್ಮಾನಿಸಿದ್ದಾನೆ.

ಶಾಲು ಸಾಬಿಗೆ ಓದು ಬರಹ ಬಾರದು. ಕಠಾರಿ ಗುರ್ತಿನ ರುಜುವನ್ನು ಮಾತ್ರ ಹಾಕುತ್ತಾನೆ. "ನಾವು ಟೀಪು ಸುಲ್ತಾ ನನ ವಂಶದವರು. ಶೂರರು. ಆದುದರಿಂದ ಕಠಾರಿಯೇ ನಮ್ಮ ರುಜುವಿನ ಗುರತು" ಎಂದು ಹೇಳಿಕೊಳ್ಳುತ್ತಾನೆ. ಹಿಂದೂ ಗಳಾದ ನಮ್ಮೊಂದಿಗೆ ಅವನು ಹೆಚ್ಚಾಗಿ ಓಡಾಡುತ್ತಿರುವದರಿಂದ, ಅವನಿಗೆ ಕುರಾನಿಗಿಂತ ರಾಮಾಯಣ ಭಾರತಗಳ ಕತೆಗಳೇ ಚನ್ನಾಗಿಗೊತ್ತು. ಅವನ ನ್ಯಾಯ ತಿರ್ಮಾನಗಳಲ್ಲೆಲ್ಲಾ ಭಾರ ತದ ಕತೆಗಳನ್ನೇ ಉದಹರಿಸುತ್ತಾನೆ. ಅವನು ಹೇಗೆ ವಿದ್ಯಾ ವಂತನಲ್ಲವೋ ಹಾಗೆ ಹಣವಂತನೂ ಅಲ್ಲ. ಆದರೆ ಹೇಗೋ ವರ್ಷ ಕ್ಕಾಗುವಷ್ಟು ಪೈರನ್ನು ಬೆಳೆಯುತ್ತಾನೆ.

ಹರಿಶ್ಚಂದ್ರನ ಆಟವಾಡಲು ನಮ್ಮ ಊರಿನವರು ನಿಶ್ಚಯಿಸಿದರೆಂದು ಹೇಳಿದನಷ್ಟೆ. ಆ ದಿವಸ ನಮ್ಮ ಊರ ಪೇಟೆಯ ಆಟಗಾರರ ಸಂಭ್ರಮ ಕೇಳಬೇಡಿ. ನಮ್ಮ ಊರಿನಲ್ಲಿ ಬಯಲಾಟವೆಂದರೆ ಸುತ್ತು ಮುತ್ತು ಹತ್ತು ಹನ್ನೆರಡು ಹಳ್ಳಿಗಳ ಜನರು ಸೇರುತ್ತಾರೆ. ಸಾವಿರಾರು ಜನರೆದುರಿಗೆ ಪಾತ್ರವನ್ನು ವಹಿಸತಕ್ಕ ನಮ್ಮ ಊರ ಆಟಗಾರರನ್ನು ಕಂಡು, ಅವರ ಹೆಂಡತಿಯರಿಗೂ ತಾಯಂದಿರಿಗೂ ಬಹಳ ಹೆಮ್ಮೆ. ಆ ದಿವಸ ಆಟಗಾರರಿಗೆ ಹೊಲದಲ್ಲಿ ಹೆಚ್ಚಾಗಿ ಕೆಲಸವಿಲ್ಲ. ಮನೆಯವರೆಲ್ಲಾ ಒಂದೇ ಮನಸ್ಸಿನಿಂದ ಅಂದು ಅವರಿಗೆ ವಿರಾಮವನ್ನು ಕೊಡುತ್ತಾರೆ. ಆಟದ ದಿವಸ ನಮ್ಮೂರಿನಲ್ಲಿ ಕೊಳ್ಳುವದಕ್ಕೆ ಒಬ್ಬರಿಗೂ ಹಾಲು ಮೊಸರು ಸಿಕ್ಕುವದಿಲ್ಲ. ಮನೆಯ ಹೆಂಗಸರು ಪಾತ್ರಗಳನ್ನು ವಹಿಸುವವರಿಗೇ ಆ ದಿವಸ ಹಾಲು ಮೊಸರನ್ನು ಮೀಸಲಿಟ್ಟು ಬಿಡುತ್ತಾರೆ. ಪ್ರತಿಯೊಬ್ಬ ಹೆಂಡತಿಯೂ ಪ್ರತಿಯೊಬ್ಬ ತಾಯಿಯೂ “ಈ ದಿವಸ ನನ್ನ ಗಂಡ ಹರಿಶ್ಚಂದ್ರನ್ನ ಕುಣೀತಾನೆ; ಇವತ್ತು ನನ್ನ ಮಗ ಚಂದ್ರಮತಿ ಆಡ್ತಾನೆ” ಎಂದೂ ಮುಂತಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ನಮ್ಮೂರ ಆಟದಲ್ಲಿ ಪಾತ್ರವನ್ನು ಕುಣಿಯುವದೆಂದರೆ ವಿಶ್ವವಿದ್ಯಾಲಯದಲ್ಲಿ ಪದವಿಯನ್ನು ಪಡೆದಂತೆ. ಪೇಟೆಯ ಪ್ರತಿಯೊಬ್ಬ ಹುಡುಗನಿಗೂ ತಾನೂ ಒಂದು ದಿವಸ ಆಟದಲ್ಲಿ ಪಾತ್ರವನ್ನು ವಹಿಸುತ್ತೇನೆಂಬುದೇ ಕನಸಾಗಿರುತ್ತದೆ.

ಆವತ್ತಿನ ಮಾತು ಹೇಳುತ್ತೇನೆ; ಸಾಯಂಕಾಲ ಏಳು ಗಂಟೆಯ ಹೊತ್ತಿಗೇ ಹಳ್ಳಿಯ ಹೆಂಗಸರೆಲ್ಲಾ ದನಗಳನ್ನು ಮನೆಗಳಲ್ಲಿ ಕಟ್ಟಿಹಾಕಿ ಅವುಗಳ ಹಾಲನ್ನು ಕರೆದು, ಅವುಗಳ ಮುಂದೆ ಹುಲ್ಲನ್ನು ಹಾಕಿ ಆಟದ ಚಪ್ಪರದ ಮುಂದೆ ಬಂದು ಕುಳಿತರು. ಆಟದ ಬಯಲು ಅವರ ನಗುವಿನ ಗೆಲುವಿನ ಧ್ವನಿಯಿಂದಲೂ, ಕಡಗಗಳ ಶಬ್ದದಿಂದಲೂ ತುಂಬಿ ಹೋಯಿತು. ಮಧ್ಯೆ ಮಧ್ಯೆ

ಅವರು ಎಲೆ ಅಡಿಕೆಗಳನ್ನು ಅಗಿಯುತ್ತಾ, ಒಬ್ಬರಿಂದೊಬ್ಬರು ಕಾಚಿನ ಪ್ರತಿ ಹೊಗೆಯ ಸೊಪ್ಪನ್ನು ತೆಗೆದುಕೊಳ್ಳುತ್ತಾ ಬಹು ದೂರ ಕೇಳುವಂತೆ ಗಟ್ಟಿಯಾಗಿ ನಗುತ್ತಿದ್ದರು ಆಗಾಗ್ಗೆ ರೈತರ ಬಾಲಕರೂ ಯುವಕರೂ ಅವರ ಬಳಿಗೆ ಬಂದು ಅವರಿಂದ ಎಲೆ ಅಡಿಕೆಯನ್ನು ತೆಗೆದುಕೊಂಡು ಒಂದೆರಡು ವಿನೋದದ ಮಾತು ಗಳನ್ನಾಡುತ್ತಾ ಹುಡಗಿಯರಿಂದ ಬೈಯಿಸಿಕೊಂಡು ನೂಕಿಸಿಕೊಂಡು ಹೋಗುತ್ತಿದ್ದರು. ಕೆಲವು ಯುವತಿಯರು ಹಾಡುವದಕ್ಕೆ ಪ್ರಾರಂಭಿ ಸಿದರು. ಅವರೆಲ್ಲ ಪ್ರತಿನಿತ್ಯ ಬಯಲಲ್ಲಿ ಕೆಲಸ ಮಾಡುತ್ತಿರುವ ದರಿಂದ, ಬಹಳ ಆರೋಗ್ಯವುಳ್ಳವರಾಗಿಯೂ, ಸ್ವಲ್ಪ ಪುಟ್ಟಗೆ ಗಂಡಸುತನವುಳ್ಳವರಾಗಿಯೂ ಇದ್ದರು ಸುಮಾರು ಒಂಬತ್ತು ಗಂಟೆಯೊಳಗಾಗಿ ಮುನ್ನೂರು ನಾನೂರು ರೈತರ ಸ್ತ್ರೀ ಪುರು ಷರು ಸೇರಿದರು. ಸಾಬಿಯು ನನ್ನನ್ನು ಸ್ವಲ್ಪ ಬೇಗ ಬರಹೇ ಳಿದ್ದುದರಿಂದ ನಾನು ಒಂಬತ್ತು ಗಂಟೆಯ ವೇಳೆಗೆ ಆಟದ ಬಯಲಿಗೆ ಹೋದೆನು. ಹಳ್ಳಿಯ ಎಲ್ಲಾ ಆನಂದಗಳನ್ನೂ ಅನು ಭವಿಸಬೇಕೆಂದಿದ್ದ ಗುಂಡನೂ ನನ್ನೊಂದಿಗೆ ಬಂದನು.

ಆ ವೇಳೆಗೆ ಗುಂಪು ಇನ್ನೂ ಹೆಚ್ಚಾಗಿತ್ತು. ಸ್ತ್ರೀ ಪುರು ಷರೆಲ್ಲರೂ ಆನಂದದಿಂದ ಮನಬಂದಂತೆ ನೆಲದ ಮೇಲೆ ಕುಳಿತು ಮಾತಾಡುತ್ತಿದ್ದರು. ಗುಂಡನು "ಇವರ ಸಂತೋಷವನ್ನು ನೋಡಿ ನನಗೆ ಹೊಟ್ಟೆಕಿಚ್ಚಾಗುತ್ತದೆ. ಹಗಲೆಲ್ಲ ಕೆಲಸ ಮಾಡು ತ್ತಾರೆ. ಈಗ ಹಕ್ಕಿಗಳಂತೆ ಆನಂದದಿಂದ ಇದ್ದಾರೆ," ಎಂದನು ಸ್ವಲ್ಪ ಹೊತ್ತಾದನಂತರ "ಈ ಜನರ ಆನಂದವು ಸಾಂಕ್ರಾಮಿಕ ವಾದುದು. ನನಗೂ ಇವರಂತೆ ಹಾಡಬೇಕೆನ್ನಿಸುತ್ತದೆ. ಅವರ ಮಗ್ಗುಲಲ್ಲಿಯೇ ಕುಳಿತುಕೊಂಡು ಆಟವನ್ನು ನೋಡೋಣ ಬಾ"- ಎಂದನು. ನಾನು "ಸಾಬಿಗೆ ಸ್ವಲ್ಪ ಸಹಾಯ ಮಾಡಬೇಕು. ನೀನೇ ಹೋಗು" ಎಂದೆ. ಗುಂಡನು "ಆ ಹುಡುಗಿಯರನ್ನು ನೋಡಿದರೆ ನನಗೆ ಗಾಬರಿಯಾಗುತ್ತದೆ. ಅವರು ಹಕ್ಕಿಗಳಂತೆ

ಮಾಡುತ್ತಿದ್ದರೂ, ಅವರ ಮುಖದ ಗಾಂಭೀರ್ಯ ಹೇಗಿದೆ ನೋಡು”
ಎಂದನು. ನಾನು “ಅಯ್ಯೋ ಮಂಕೆ ಎಂದುಕೊಂಡು ಹಾಗಾ
ದರೆ ಹೋಗಬೇಡ” ಎಂದೆ.

ಅಷ್ಟು ಹೊತ್ತಿಗೆ ಶಾಲುಸಾಬಿ ಬಂದನು. ಅವನು ಬಂದ
ಕೂಡಲೆ ಹೆಂಗಸರ ಸದ್ದು ಸ್ವಲ್ಪ ಕಡಿಮೆಯಾಯಿತು. ಸಾಬಿಯು
ಬಂದಕೂಡಲೆ ಆಟಗಾರರೆಲ್ಲ ಚಪ್ಪರಕ್ಕೆ ಬಂದರು. ಪರದೆಯ
ಹಿಂದುಗಡೆ ಪ್ರತಿಯೊಬ್ಬನೂ ತನತನಗೆ ಮನಸ್ಸು ಬಂದಂತೆ ಬಣ್ಣ
ವನ್ನು ಬಳಿದುಕೊಂಡನು. ಚಂದ್ರಮತಿಯ ವೇಷಧಾರಿಯಾದ
ಮಾದನು ಜೋಡಿದಾರರ ಮನೆಯಿಂದಲೇ ಒಂದು ಬಣ್ಣದ ಸೀರೆ
ಎರವಾಗಿ ತಂದನು. ಹರಿಶ್ಚಂದ್ರನು ಶಾಲುಸಾಬಿಯ ರುಮಾಲನ್ನೇ
ಅವನ ತಲೆಯ ಮೇಲಿಂದ ತೆಗೆದು ತನ್ನ ತಲೆಯಮೇಲೆ ಇಟ್ಟು
ಕೊಂಡನು. ಹರಿಶ್ಚಂದ್ರನು ರಂಗಸ್ಥಳಕ್ಕೆ ಬಂದಕೂಡಲೇ ಶೀನ
ಪ್ಪನು “ಇದು ಸಾಬಿಯ ರುಮಾಲು” ಎಂದನು. ವಿಶ್ವಾಮಿತ್ರನ
ಪಾತ್ರವನ್ನು ವಹಿಸಿದವನಿಗೆ ಸರಿಯಾದ ಗಡ್ಡದೊರೆಯುದೆ ಪೇಚಾಟ
ವಾಯಿತು. ಶಾ: ಸಾಬಿಗೆ ಗಡ್ಡವೇನೋ ಇತ್ತು. ಆದರೆ ಅದನ್ನು
ಕೇಳಲು ಸಾಧ್ಯವಿರಲಿಲ್ಲ. ಹರಿಶ್ಚಂದ್ರನು ಗುಂಡನ ವಾಕಿಂಗ್
ಸ್ಟಿಕ್ಕನ್ನೂ ಕನ್ನಡಕವನ್ನೂ ತೆಗೆದುಕೊಂಡನು. ಆ ವೇಳೆಗೆ ಜೋಡಿ
ದಾರರು, ಅವರ ಹೆಂಡತಿ, ನಾಣಿ, ಕಿಟ್ಟು, ಶಾಸ್ತ್ರಿ, ಭಟ್ಟ ಮತ್ತು
ರಾಮಸ್ವಾಮಿ ಎಲ್ಲರೂ ಬಂದರು. ಅವರನ್ನೆಲ್ಲಾ ಎರಡು ಮೂರು
ಬೆಂಚುಗಳನ್ನು ಹಾಕಿ ಕೂರಿಸಿದುದಾಯಿತು.

ಹತ್ತುವರೆ ಗಂಟೆಯ ಹೊತ್ತಿಗೆ ಸುಮಾರು ಒಂದು ಸಾವಿರ
ಜನ ನೆರೆದು ಹೋಯಿತು. ಎಲ್ಲಿಂದ ಎಲ್ಲಿಯ ವರೆಗೆ ನೋಡಿ
ದರೂ ಮನುಷ್ಯರ ತಲೆಗಳ ಸಮುದ್ರ. ಆಟವು ಪ್ರಾರಂಭವಾಗ
ದಿದ್ದರಿಂದ ಜನರಲ್ಲಿ ಗುಜುಗುಜು ಹೆಚ್ಚಾಯಿತು. ಸಾಬಿಯು ರಂಗ
ಸ್ಥಳದ ಮುಂದೆ ನೆಲದ ಮೇಲೆ ಒಂದು ಚಾಪೆ ಹಾಕಿಕೊಂಡು
ಅದರ ಮೇಲೆ ಕುಳಿತನು. ಸೂಜಿ ಹಾಕುವದಕ್ಕೆ ಕೂಡ ಜಾಗವಿ
ಲ್ಲದಂತೆ ಅವನ ಸುತ್ತ ಜನ ನೆರೆದಿದ್ದರು. ಗುಂಡನು ಶೀನ

ಪ್ಪನ ಮಗ್ಗಲಲ್ಲಿ ಬೆಂಚಿನ ಮೇಲೆ ಕುಳಿತಿದ್ದವನು "ನಾವೂ ಅಲ್ಲಿಗೆ ಹೋಗಿ ನೆಲದ ಮೇಲೆ ಸಾಬಿಯ ಜತೆಯಲ್ಲಿ ಕುಳಿತುಕೊಳ್ಳೋಣ" ಎಂದನು. ನಾನು "ಬೇಡ ಅಲ್ಲಿ ಸ್ಥಳವಿಲ್ಲ. ಜನ ಮೈಮೇಲೆ ಬೀಳ್ತಾರೆ. ಇಲ್ಲಿ ಯಾರ ತಂಟೆಯೂ ಇಲ್ಲ, ಇಲ್ಲೇ ಇರೋಣ" ಎಂದೆನು. – ಗುಂಡನು "ಅವರೆಲ್ಲಾ ಆಡುವ ಮಾತುಗಳನ್ನು ಕೇಳಬಹುದು. ಪುಸ್ತಕಗಳಿಂದಲೂ ಕಾವ್ಯಗಳಿಂದಲೂ ತಲೆಗೆಡದ ಅವರ ತೀಕ್ಷ್ಣಬುದ್ಧಿಯು ಆಟದ ಸರಿಯಾದ ಬೆಲೆಯನ್ನು ಗ್ರಹಿಸುತ್ತದೆ" ಎಂದನು. ಅವನು ಹೇಳಿದುದರ ಅರ್ಥವೇನೋ ನನಗೆ ತಿಳಿಯಲಿಲ್ಲ. ಆದರೆ ಅವನ ಜತೆಯಲ್ಲಿ ಹೋಗಿ ಸಾಬಿಯ ಚಾಪೆಯ ಮೇಲೆ ಕುಳಿತುಕೊಂಡೆನು. ನಮ್ಮ ಎಡಗಡೆ ಹೆಂಗಸರೂ ಬಲಗಡೆ ಗಂಡಸರೂ ಆಟದಲ್ಲಿ ಬರುವ ಬೇರೆ ಬೇರೆ ಪಾತ್ರಗಳ ವಿಷಯವನ್ನು ಕುರಿತು ಮಾತನಾಡುತ್ತಿದ್ದರು.

ಆಟವು ಪ್ರಾರಂಭವಾಗದಿದ್ದುದನ್ನು ಕಂಡು ಶಾಲುಸಾಬಿಯು ರಂಗಸ್ಥಳದ ಕಡೆಗೆ ಧ್ವನಿಮಾಡಿ "ಪರದೆ ಎತ್ತಿರೋ, ಎಷ್ಟು ಹೊತ್ತು" ಎಂದನು. ಅನಂತರ ಒಳಗಡೆ ಗಣಪತಿಗೆ ಮಂಗಳಾರತಿಯಾದ ಗಂಟೆಧ್ವನಿ ಕೇಳಿಸಿತು. ಹೊರಗೆ ಕಟ್ಟಿದ ಒಂದೇ ಒಂದು ಪರದೆಯನ್ನು ಮೇಲಕ್ಕೆ ಎತ್ತಿದರು. ಹರಿಶ್ಚಂದ್ರನ ದರ್ಬಾರು ಕಣ್ಣಿಗೆ ಬಿತ್ತು. ಹರಿಶ್ಚಂದ್ರನು ಸಾಬಿಯ ರುಮಾಲನ್ನೂ ಗುಂಡನ ಕನ್ನಡಕವನ್ನೂ ಧರಿಸಿ, ಕೈಯಲ್ಲಿ ಗುಂಡನ ಬೆತ್ತವನ್ನು ಹಿಡಿದುಕೊಂಡಿದ್ದನು. ಪರದೆ ಎತ್ತಿದಕೂಡಲೇ ಅವನು "ಅರರೆ ಎನ್ನಯ ಸಮಾನನಾರು" ಎಂದು ಪ್ರಾರಂಭಿಸಿದನು. ಜತೆಯಲ್ಲಿ ಅವನು ಸ್ವಂತ ವೆಚ್ಚದಿಂದ ನಿಯಮಿಸಿಕೊಂಡಿದ್ದ ನಮ್ಮ ಊರು ಬ್ಯಾಂಡಿನವರು, ಅವನ ದರ್ಬಾರು ಮುಗಿಯುವವರೆಗೆ ಬ್ಯಾಂಡನ್ನು ಬಾರಿಸಿದರು. ಒಟ್ಟಿನಲ್ಲಿ ಹರಿಶ್ಚಂದ್ರನ ಪಾತ್ರವು ಚೆನ್ನಾಗಿತ್ತು. ಪಾತ್ರಗಾರ ಮಾದನ ಹೆಂಡತಿಯು ಹೆಮ್ಮೆಯಿಂದ ಸುತ್ತುಮುತ್ತು ಇದ್ದವರೊಂದಿಗೆ ಮಾತನಾಡುತ್ತಿದ್ದಳು.

ಪರದೆಯನ್ನು ಮತ್ತೆ ಕೆಳಕ್ಕೆ ಬಿಡಲಿಲ್ಲ. ಪಾತ್ರಗಳೆಲ್ಲಾ ಪರದೆಯ ಒಂದು ಕಡೆಯಿಂದ ಬರುವುದು, ಮತ್ತೊಂದು ಕಡೆಯಿಂದ ಹೋಗುವುದು. ಇದೇ ಪದ್ಧತಿ. ವಿಶ್ವಾಮಿತ್ರರು ಸೃಷ್ಟಿಸಿದ ಚಂಡಾಳ ಸ್ತ್ರೀಯರು ಬಂದರು. ಅವರು ಹರಿಶ್ಚಂದ್ರನ ಎದುರಿಗೆ ನಾಟ್ಯವಾಡಿದರು. ಹರಿಶ್ಚಂದ್ರನು ಅವರನ್ನು ನೋಡಿ “ನೋಡಿ ನೃಪ ಮೆಚ್ಚಿದನು ನಾಟ್ಯವ” ಎಂಬುದಾಗಿ ಹಾಡಿದನು. ಗುಂಡನು “ಏನೋ ಇದು. ಹರಿಶ್ಚಂದ್ರನ ಪಾತ್ರ ವಹಿಸಿದವನೇ ‘ನೋಡಿ ನೃಪ ಮೆಚ್ಚಿದನು ನಾಟ್ಯವ’ ಎಂಬುದಾಗಿ ಹಾಡುತ್ತಾನೆ.” ಎಂದನು. ನಾನು “ಹೌದು ಯಾವುದೋ ಹರಿಶ್ಚಂದ್ರನ ಕತೆಯಿಂದ ಎತ್ತಿದ ಹಾಡದು. ಅದನ್ನೇ ಇಲ್ಲಿ ಹಾಡುತ್ತಾನೆ. ಇವರ ಅನೇಕ ಹಾಡುಗಳು ಹೀಗೆ ಬೇರೆ ಪುಸ್ತಕಗಳಿಂದ ತೆಗೆದವು” ಎಂದೆ.

ನಮ್ಮ ಊರಿನ ಆಟದಲ್ಲಿ ಕುಣಿತವು ಬಲು ಮುಖ್ಯ. ಈಚೆಗೆ ಯಾರೋ ನಾಗರಿಕರು “ಕುಣಿತ ಬೇಡ, ನಾಟಕದ ಹಾಗೆ ಆಡೋಣ. ಈ ಕುಣಿತ ಅನಾಗರೀಕತೆಯ ಗುರುತು” ಎಂದು ನಿಲ್ಲಿಸಿ ಬಿಟ್ಟಿದ್ದರು. ಸಾಬಿ ಒಂದು ದಿವಸ ಆಟಗಾರರನ್ನೆಲ್ಲಾ ಒಂದುಗೂಡಿಸಿ “ನೀವು ಕುಣಿತ ಬಿಡಬೇಡಿ. ಕುಣಿತ ಬಿಟ್ಟರೆ ನಿಮ್ಮ ಆಟದ ಸ್ವಾರಸ್ಯ ಕೆಟ್ಟು ಹೋಗುತ್ತೆ. ಆ ದೊಡ್ಡ ದೊಡ್ಡ ಕಂಪನಿಗಳಂತೆ, ಬಟ್ಟೆ ಒಡವೆ ಸೀನು ಇವುಗಳ ಆಟ ಆಡೋಕೆ ನಮ್ಮ ಹಣೇಲಿ ಬರೆದಿಲ್ಲ. ಕುಣಿತ ಬಿಟ್ಟರೆ ನಮ್ಮ ಹಕ್ಕನ್ನೇ ಬಿಟ್ಟಂತೆ ಆಗುತ್ತೆ” ಎಂದನು. ನಾವೂ “ಕುಣಿತ ಇಟ್ಕೊಳ್ಳಿ. ನಾವೂ ವೇಷ ಹಾಕಿಕೊಳ್ಳುತ್ತೇವೆ” ಎಂದೆವು. ಅಲ್ಲಿಂದೀಚೆಗೆ ಕುಣಿತವು ಮತ್ತೆ ಪ್ರಾರಂಭವಾಗಿದೆ.

ಬಯಲಾಟದ ಮುಖ್ಯ ಸ್ವಾರಸ್ಯವೇ ಕುಣಿತ. ಪಾತ್ರಗಳು ‘ಥೈ ತಕಧಿಂ ಧಿಂ ಧಿಂ’ ಎಂಬುದಾಗಿ ಕುಣಿದಾಗ, ಪ್ರೇಕ್ಷಕರ ಹೃದಯಗಳು ಅವರೊಂದಿಗೆ ಕುಣಿಯುತ್ತಾ ಇರುತ್ತವೆ. ಎಲ್ಲಾ

ಪಾತ್ರಗಳೂ ಕುಣಿಯುತ್ತಾರೆ. ಸ್ತ್ರೀ ಪಾತ್ರಗಳು 'ನರ್ತನ' ಮಾಡುತ್ತಾರೆ. ಪುರುಷ ಪಾತ್ರಗಳು ರಂಗಸ್ಥಳದಲ್ಲಿ ಹಾಸಿರುವ ಹಲಗೆ ಒಡೆದು ಹೋಗುವಂತೆ, ಕಾಲು ಮುರಿದು ಹೋಗುವಂತೆ ಕುಣಿಯುತ್ತಾರೆ. ಹರಿಶ್ಚಂದ್ರ ಮಹಾರಾಜರೂ ಕೂಡ, ಗಾಂಭೀರ್ಯವನ್ನು ಬಿಟ್ಟು ಕುಣಿಯುವದರಲ್ಲಿಯೇ ತನ್ನ ರಾಜತ್ವವನ್ನು ತೋರಿಸಿದನು. ಗಡ್ಡಕ್ಕೆ ನೆರೆಬಂದಿದ್ದ ವಿಶ್ವಾಮಿತ್ರ ಋಷಿಯೂ ಭಯಂಕರವಾಗಿ ಕುಣಿದನು. ಚಂದ್ರಮತಿಯು ರಂಗಸ್ಥಳಕ್ಕೆ ಬರುವಾಗ ತಾನೆ—

"ಬಂಥಾಳೋ ಚಂದ್ರಾಮತಿ ಬಂಥಾಳೋ"

ಎಂಬುದಾಗಿ ಹಾಡುತ್ತಾ ಕುಣಿದುಕೊಂಡು ಬಂದಳು. ಅವಳು ಬಂದಕೂಡಲೆ ನಮ್ಮ ಹಿಂದೆ ಕುಳಿತಿದ್ದ ಸ್ತ್ರೀಯರು "ಮಾತಾಯಿ ಎಷ್ಟು ಕಷ್ಟಪಡಬೇಕೋ" ಎಂದರು. ಜನರಿಗೆ ತಾವು ನೋಡುತ್ತಿದ್ದುದು ಆಟವೆಂಬುದೇ ಮರೆತು ಹೋಗಿತ್ತು. ಆ ದೊಡ್ಡ ಗುಂಪು, ಮಾತನಾಡದೆ ತಮ್ಮನ್ನು ತಾವು ಮರೆತು, ಆಟವನ್ನು ನಿರೀಕ್ಷಿಸುತ್ತಿದ್ದರು. ವಿಶ್ವಾಮಿತ್ರನು ಹರಿಶ್ಚಂದ್ರನನ್ನು ಒದ್ದಾಗ ಒಬ್ಬನು "ಮೊರೀನ ಒದ್ಬಿಟ್ನಲ್ಲ ಬಡಜೋಗಿ" ಎಂದನು. ಮತ್ತೊಬ್ಬನು "ಅಂತಾವನ್ಗೆ ಹಾಂಗಾಯ್ತಂತೆ ನಮ್ಮ ಪಾಡೇನು ಮಹಾ" ಎಂದನು. ಸಾಹೇಬನು ಹಿಂದುಗಡೆಯ ಜನದ ಗುಂಪನ್ನು ನೋಡಿ "ರಾಮಸ್ವಾಮಿ, ಈ ಹಿಂದುಜನ ಎಷ್ಟು ಸೇರಯ್ತೆ ನೋಡಿದ್ಯಾ" ಎಂದನು. ಗುಂಡನು "ಹಿಂದೂಜನ ಅಂದರೆ ನಾವೇನು ಹಿಂದುಗಳಲ್ಲವೆ" ಎಂದು ಕೇಳಿದನು. ನಾನು "ಹಾಗಲ್ಲ ಸಾಬಿಯು ಬ್ರಾಹ್ಮಣರನ್ನೂ ಮುಸಲ್ಮಾನರನ್ನೂ ಹೊರತು ಉಳಿದವರನ್ನೆಲ್ಲಾ ಹಿಂದುಗಳು ಎಂದು ಕರೆಯುತ್ತಾನೆ. ಹಿಂದೂಗಳೆಂದರೆ ಹಿಂದುಳಿದವರೆಂದು ಇವನ ಅರ್ಥ. ಇದು ಇವನ ಸ್ವಂತಪದ" ಎಂದೆನು. ಅಷ್ಟರಲ್ಲಿಯೆ ಸಾಹೇಬನು "ಕರ್ನಾಟ್ಕೆ ಜನ್ಕೆ ಈ ಆಟ ಭಾರಿ ಕುಸಿ" ಎಂದನು. ಗುಂಡನು ಮತ್ತೆ "ಕರ್ನಾಟಕ್ಕೆ

ಜನ್ಕೆ ಅಂದರೆ, ಕನ್ನಡಿಗರಿಗೆ ಅಂತಲೊ" ಎಂದು ಕೇಳಿದನು. ನಾನು "ಅಲ್ಲ ಸಾಬಿಯ ಮಾತುಗಳೆಲ್ಲಾ ತಿಳಿಯಬೇಕಾದರೆ, ನಿನಗೆ ಒಂದು ನಿಘಂಟುಬೇಕು. ಆವನ ಶಬ್ದ ಸಂಪತ್ತಿಯೇ ಬೇರೆ. 'ಕರ್ನಾಟ್ಕಿ ಜನ' ವೆಂದರೆ ಅವನ ಅಭಿಪ್ರಾಯದಲ್ಲಿ ಅವಿದ್ಯಾವಂತರೆಂದು ಅರ್ಥ" ಎಂದನು. ಗುಂಡನು "ಸರಿ ಹೋಯ್ತು" ಎಂದು ನಕ್ಕನು.

ಆ ವೇಳೆಗೆ ಹರಿಶ್ಚಂದ್ರನು ಮತ್ತೆ ರಂಗಸ್ಥಳಕ್ಕೆ ಬಂದನು. ಅವನಿಗಂತೂ ಆವತ್ತು ಕುಣಿದು ಕುಣಿದು ಸಾಕಾಗಿ ಹೋಗಿತ್ತು. ಬಂದವನೇ "ಅಥಳ ವಿಥಳ ರಸಾಥಳ ಪಾಥಾಳಾದಿ ಛಪ್ಪನ್ನೈವ ತ್ತಾರು ದೇಶಗಳಲ್ಲೂ ಅಂಗ ವಂಗ ಕಳಿಂಗ ಸೌರಾಷ್ಟ್ರಾದಿ ಪಂಚ ಮಹಾ ಲೋಕಗಳಲ್ಲಿಯೂ, ನನ್ನಂತಹ ದುರದೃಷ್ಟಶಾಲಿ ಇದ್ದಾ ನೆಯೇ ? "ಎಂದನು. ಗುಂಡನು ಸಾಹೇಬನನ್ನು ಕುರಿತು "ಅತಳ ವಿತಳ. ರಸಾತಳ ಪಾತಾಳಾದಿಗಳು ಲೋಕಗಳಲ್ಲವೆ ? ಅವು ಗಳನ್ನು ಛಪ್ಪನ್ನೈವತ್ತಾರು ದೇಶಗಳು ಎಂದು ಹರಿಶ್ಚಂದ್ರ ಹೇಳಿ ಬಿಟ್ಟನಲ್ಲಾ?" ಎಂದನು. ಸಾಹೇಬನು ಸ್ವಲ್ಪವೂ ಯೋಚಿಸದೆ "ಹಿಂದೆ ಅವು ಲೋಕಗಳಾಗಿದ್ದು, ಈಗ ಅವು ಛಪ್ಪನ್ನೈವ ತ್ತಾರು ದೇಶಗಳಾಗಿವೆ" ಎಂದನು. ಗುಂಡನು ಮಾತನಾಡಲಿಲ್ಲ.

ಆಟವು ಬೆಳಗಾದರೂ ಮುಗಿಯಲೇ ಇಲ್ಲ. ಸೂರ್ಯೋದಯ ವಾಗಿ ಹೊಂಬಣ್ಣದ ಎಳೆ ಬಿಸಿಲು ಸಭೆಯನ್ನೂ ರಂಗಸ್ಥಳವನ್ನೂ ಅಪ್ಪಿದ ಕೂಡಲೇ, ನಾಟಕವನ್ನು ನಿಲ್ಲಿಸಬೇಕೆಂದು ಸಾಬಿಯು ಅಪ್ಪಣೆ ಮಾಡಿದನು. ಆಗ ತಾನೇ ಹರಿಶ್ಚಂದ್ರನಿಗೆ ದೇವತೆ ಗಳೆಲ್ಲಾ ಪ್ರತ್ಯಕ್ಷವಾಗಲು ಬಂದಿದ್ದರು. ಆದರೆ ವಿಷ್ಣು ಇನ್ನೂ ಬಂದಿರಲಿಲ್ಲ. ಪಾಪ, ವಿಷ್ಣುವು ಸಾಯಂಕಾಲದಿಂದ ಚನ್ನಾಗಿ ಅಲಂಕಾರ ಮಾಡಿಕೊಂಡು, ತನ್ನ ಸರದಿಯು ಬರುವದೇ ಕಾಯುತ್ತಾ ಇದ್ದನು. ರಾತ್ರಿಯಲ್ಲಾ ಕಷ್ಟಪಟ್ಟು "ತರುಣ ತುಲ ಸಿಯುಮಾಲೆಯೊಪ್ಪಲು" ಎಂಬಂತೆ ಒಂದು ತುಳಸೀ ಮಾಲೆ

ಯನ್ನು ಕಟ್ಟಿ ಕತ್ತಿಗೆ ಹಾಕಿಕೊಂಡನು. ಆಟವು ಪೂರ್ತಿಯಾಗಿ ಪ್ರೇಕ್ಷಕರೆಲ್ಲಾ ಏನುಸದರಲ್ಲಿರುವದನ್ನು ಕಂಡು ವಿಷ್ಣುವು ರಂಗ ಸ್ಥಳಕ್ಕೆ ಬಂದು "ನಾನು ವಿಷ್ಣು ಬಂದಿದ್ದೇನೆ. ಒಂದ್ಗಳಿಗೆ ಇದ್ಕೊಂಡು ನಾನು ಆಡೋದ್ನ ನೋಡ್ಕೊಂಡು ಹೋಗಬೇಕು" ಎಂದನು. ಎದ್ದಿದ್ದವರೆಲ್ಲಾ ನಗುತ್ತಾ ಕುಳಿತು ಕೊಂಡರು. ವಿಷ್ಣುವು ಭಯಂಕರವಾಗಿ ಗರ್ಜಿಸುತ್ತಾ,

"ತರುಣ ತುಳಸಿಯ ಮಾಲೆಯೊಪ್ಪುವ

ಗರುಡ ದೇವನ ಬರವ ಕಂಡನು ಬಾಗಿಲಲಿ ಜನಪಾ"

ಎಂಬುದಾಗಿ ಪದೇ ಪದೆ ತುಳಸೀ ಮಾಲೆಯನ್ನು ತೋರಿಸುತ್ತಾ ನಗುತ್ತಾ ನರ್ತನ ಮಾಡಿದನು. ಗುಂಡನು "ಇವನು ಬಲಾತ್ಕಾರವಾಗಿ ಎಲ್ಲರನ್ನೂ ನಿಲ್ಲಿಸಿ ಕುಣೀದೆ ಹೋಗಿದ್ರೆ ಏನು ಉಳಿದು ಹೋಗಿತ್ತು" ಎಂದನು. ಸಾಹೇಬನು "ಹಾಗಲ್ಲ ಗುಂಡಪ್ಪ, ನಿನ್ನೆ ರಾತ್ರಿಯಿಂದ ಕುಣಿಯೋಕೆ ಸಿದ್ಧ ಮಾಡ್ಕೊಂಡು ಸಿದ್ಧೆಮಾಡದೆ ಮಿಟ ಮಿಟನೆ ಕಣ್ಣುಬಿಟ್ಕೊಂಡು ಕೂತಿದ್ದೋನ್ನ ಕುಣೀಬೇಡ ಅಂದ್ಬಿಟ್ರೆ ಅವನಿಗೆ ಎಷ್ಟು ಸಂಕಟ ಉಂಟಾಗಬಹುದು. ಕರ್ನಾಟ್ಕ ಜನ್ಕೆ ಇದು ಗೊತ್ತು. ಅದ್ಕೆ ಅವರೊಬ್ಬರೂ ಕದಲದೆ ಕೂತು ಬಿಟ್ರು." ಎಂದನು. ಆಟ ಮುಗಿಯಿತು ಜನರಿಗೆ ಯಾವ ನಾಟಕದಿಂದಲೂ ಆಗದ ಸಂತೋಷ ಇದರಿಂದ ಉಂಟಾದಂತೆ ತೋರಿತು. ಊರಲ್ಲಿ ಮೂರು ದಿನಗಳವರೆಗೆ ಎಲ್ಲಿ ಯಾರ ಬಾಯಲ್ಲಿ ನೋಡಿದರೂ ಆಟದ ಮಾತೇ ಮಾತಾಗಿತ್ತು.

ಹಲ್ಲುಜ್ಜಿಕೊಂಡು ಬರೋಣವೆಂದು ನದಿಗೆ ಹೋದೆವು. ನಮ್ಮೂರ ನದಿಯನ್ನು ನೀವು ಬೇಸಿಗೆ ಕಾಲದಲ್ಲಿ ನೋಡಬೇಕು. ಅದಕ್ಕೆ ಸಮನಾದ ನದಿಯು ಪ್ರಪಂಚದಲ್ಲಿ ಮತ್ತೆಲ್ಲೂ ಇಲ್ಲವೆಂದು ಒಪ್ಪಿಯೇ ಒಪ್ಪುತ್ತೀರಿ. ನದಿಯಲ್ಲಿ ನಮ್ಮೂರ ಸ್ತ್ರೀಯರ ಸಭೆ ನೇರಿತ್ತು. ಅವರೆಲ್ಲಾ ಎದೆಯುದ್ದ ತಂಪಾದ ನೀರಿನಲ್ಲಿ ನಿಂತು ಕೊಂಡು ಸ್ನಾನ ಮಾಡುತ್ತಾ ನಗುತ್ತಿದ್ದರು. ನೀರಿನ ಅಲೆಗಳು

ನೆಗೆನೆಗೆದು ಅವರ ಅವಯವಗಳನ್ನು ಮುತ್ತಿಡುತ್ತಿದ್ದವು. ಬಿಚ್ಚಿ ಹೋದ ಅವರ ತಲೆಗೂದಲೂ ಸೀರೆಯ ಸೆರಗೂ ನೀರಿನ ಮೇಲೆ ಹರಡಿಕೊಂಡು ಪಾಚಿಯಂತೆ ತೇಲಾಡುತ್ತಿದ್ದವು. ಅವರಲ್ಲಿ ಮಧ್ಯೆ ಮಧ್ಯೆ ವಿನೋದದ ಮಾತುಗಳು ನಡೆದು ಅವರು ನಗುವದು ಹೊಳೆಯ ಮಾವಿನ ತೋಪಿನಲ್ಲಿ ಇಂಪಾಗಿ ಪ್ರತಿಧ್ವನಿತವಾಗುತ್ತಲಿದ್ದಿತು. ಎರಡು ಮೂರು ಕೆಳಗಡೆ ಒಕ್ಕಲಿಗರ ಹೆಂಗಸರು ಗಡಿಗೆಗಳಲ್ಲಿ ನೀರನ್ನು ತುಂಬಿಕೊಂಡು ರಾತ್ರಿಯ ಆಟನ್ನು ಕುರಿತು ಮಾತನಾಡುತ್ತಿದ್ದರು. ಮಾದನ ಹೆಂಡತಿಯು— "ಹರಿಶ್ಚಂದ್ರ ಬಾರಿ ಪೈನಾಗಿ ಕುಣಿದ. ದರ್ಭಾರು ಕಣ್ಣು ಕುಕ್ಕ್ಯಾ ಹಂಗಿತ್ತು. ಬ್ಯಾಂಡ ಬಲು ಚಂದಾಗಿತ್ತು" ಎಂದಳು. ವಿಷ್ಣುವಿನ ಪಾತ್ರವನ್ನು ವಹಿಸಿದ ಸಿಂಗನ ಹೆಂಡತಿಯು— "ವಿಷ್ಣು ಭಾರಿ ಪೈನಾಗಿ ಹಾಡಿದ. ಪೋರ್ಟ್ರೋಕೆ ಎದ್ದು ನಿಂತಿದ್ದ ಜನಾ ಎಲ್ಲಾ ಅವನ ಕುಣಿತ ನೋಡಿ ಬೆಪ್ಪಾಗಿ ಒಂದು ಗಳಿಗೆ ಮತ್ತ ಕೂತೇಬಿಟ್ರು" ಎಂದಳು. ಚಂದ್ರಮತಿಯ ಪಾತ್ರವನ್ನು ವಹಿಸಿದ್ದ ಚೆನ್ನನ ತಾಯಿಯು ನಮ್ಮ ಚೆನ್ನ ಧರ್ಮಾವರದ ಸೀರೇಲಿ ರಾಣಿ ಹಂಗೆ ಕಂಡ. ಕಣ್ಣೋಟು ಹೊಳಪು, ಕೆನ್ನೆ ಎಂತಾ ಬಣ್ಣ, ತುಟಿ ಎಷ್ಟು ಕೆಂಪು, ಹೊಸೂರ ಮೇಳದ ಹುಡಿಗಿ ಹಂಗೆ ನಾಜೂಕಾಗಿ ಕುಣಿದ. ನಿನ್ನೆ ರಾತ್ರಿ ·ಕರೆದ ಹಸಿನ್ಹಾಲು ಮೂರು ಪಾವು ಅವನ್ಗೇ ಹಾಕಿದೆ. ಮನೇಲಿ ಇನ್ನ್ಯಾರೂ ಹಾಲು ಕುಡಿಸಿಲ್ಲ. ಎಂಟು ವರ್ಷದ ಪೋರಾ ಕೂಡ "ಈವತ್ತು ಚೆನ್ನನ್ಗೆ ಹಾಲು ಹಾಕ್ಸಿದು, ರಾತ್ರಿಯೆಲ್ಲಾ ಆಟ ಕುಣಿತಾನೆ ಎಂದ" ಎಂದಳು. ಈ ಮಾತುಗಳನ್ನೆಲ್ಲಾ ಕೇಳಿಕೊಂಡು ನಾವೂ ಬೇರೆ ಬೇರೆ ಪಾತ್ರಗಳ ಕುಣಿತಗಳನ್ನು ವಿಮರ್ಶಿಸುತ್ತಾ ಮನೆಗೆ ಬಂದೆವು.



# ಪರಿಚಯ.

ಹಳ್ಳಿಯ ಜೀವನವೂ ಸಾಹಿತ್ಯಕ್ಕೆ ಸರಸವಾದ ವಿಷಯವಾಗಬಲ್ಲದೆಂಬುದನ್ನು ಕನ್ನಡದಲ್ಲಿ ಮೊದಲು ತಿಳಿಸಿದ ಶ್ರೇಯಸ್ಸು ಶ್ರೀಮಾನ್ ಗೋರೂರು ರಾಮಸ್ವಾಮಿ ಅಯ್ಯಂಗಾರರಿಗೆ ಸಲ್ಲುತಕ್ಕದೆಂದರೆ ತಪ್ಪಾಗದು. ಇವರ 'ನಮ್ಮೂರಿನ ರಸಿಕರ' ನ್ನು ಓದುವಾಗ ನಾಣ ಶೀನಪ್ಪನವರು ನಾವು ಕಂಡ ಚಿರಪರಿಚಿತ ವ್ಯಕ್ತಿಗಳಂತೆಯೆ ತೋರುವರು. ಎಂತಹ ಸಂದರ್ಭವನ್ನೂ ತಿಳಿಯಾದ ಹಾಸ್ಯದಲ್ಲಿ ತೇಲಿಸಿಕೊಂಡು ಹೋಗುವದು ಇವರಿಗೆ ಸಹಜವಾಗಿ ಮೈಗೂಡಿದ ವಿಷಯ. 'ಮೈಯಾರಿ' 'ಗರುಡಗಂಬದ ದಾಸಯ್ಯ' 'ಹಳ್ಳಿಯ ಹಾಡುಗಳು', ಮೊದಲಾದ ಕತೆ, ಹರಟೆ, ಜನಪದ ಗೀತಾಸಂಗ್ರಹಗಳಲ್ಲಿ ಈ ಮಾತನ್ನು ಕಾಣಬಹುದು. ಇಂದಿನ ನಾಗರಿಕತೆಯ ಪ್ರವೇಶದಿಂದ ಹಳ್ಳಿಯ ಸುಖ ಸಮಾಧಾನದ ಜೀವನ ಹೇಗೆ ಕೆಡುತ್ತಲಿದೆಯೆಂಬುದನ್ನು ಒಳ್ಳೆ ಮಾರ್ಮಿಕವಾಗಿ ತೋರಿಸಿದ್ದಾರೆ.

ಇಲ್ಲಿ ತೆಗೆದುಕೊಂಡ ನಮ್ಮೂರಿನ ರಸಿಕರಲ್ಲಿಯ ಭಾಗವಾದ 'ನಮ್ಮೂರಿನ ಬಯಲಾಟ' ವನ್ನು ಓದಿದರೆ ನಮ್ಮ ಹಳ್ಳಿಗಳಲ್ಲಿಯ ಬೈಲಾಟದ ಪ್ರಸಂಗವು ತಾನೆತಾನಾಗಿ ನೆನಪಾಗುವದು.

## ಅಭ್ಯಾಸ.

೧ ಶಾಲು ಸಾಬಿಯ ಸ್ವಭಾವವನ್ನು ಚಿತ್ರಿಸಿರಿ. ಇಂಥ ವ್ಯಕ್ತಿಗಳು ಹಳ್ಳಿಗಳಲ್ಲಿ ಅನೇಕರಿರುವರಲ್ಲವೆ? ನಿಮ್ಮ ಹಳ್ಳಿಯಲ್ಲಿ ಅಂತಹ ವ್ಯಕ್ತಿಯನ್ನು ಕಂಡಿದ್ದರೆ ಅವನ ಸ್ವಭಾವ ಚಿತ್ರವನ್ನು ಕೊಡಿರಿ.

೨ ನೀವು ನೋಡಿದ ಒಂದು ಬೈಲಾಟವನ್ನು ವರ್ಣಿಸಿರಿ.

೩ ಇಂದಿನ ನಾಟಕಗಳನ್ನು ನೋಡಿದವರಿಗೆ ಬೈಲಾಟದಲ್ಲಿ ಯಾವ ಕುಂದುಕೊರತೆಗಳು ಕಂಡು ಬರುತ್ತವೆ ?

೪ ಹಳ್ಳಿಯಲ್ಲಿಯ ಬೈಲಾಟವೆಂದರೆ ಒಂದು ದೊಡ್ಡ ಸಮಾರಂಭವೆಂಬುದನ್ನು ಈ ಪಾಠದಲ್ಲಿ ಯಾವ ಮಾತುಗಳಿಂದ ಸಮರ್ಥಿಸುವಿರಿ ?

೫ ಹಳ್ಳಿಯ ಜೀವನದ ಸರಳತೆಯನ್ನೂ ಸೌಹಾರ್ದವನ್ನೂ ತೋರಿಸುವ ಕೆಲಪ್ರಸಂಗಗಳನ್ನು ಹೇಳಿರಿ.

೬ 'ಹಳ್ಳಿಯ ಜಾತ್ರೆ', 'ಹಳ್ಳಿಯ ರಥೋತ್ಸವ' ಇವುಗಳಲ್ಲಿ ಒಂದರ ಬಗ್ಗೆ ನಿಬಂಧ ಬರೆಯಿರಿ.

ಸ್ಪಷ್ಟೀಕರಿಸಿರಿ—

'ಸಾಬೀ ನ್ಯಾಯವೆಲ್ಲ ಬುರಡಿಯ ನ್ಯಾಯ' ಅವನಿಗೇನು ಗೊತ್ತು ?

'ನಾವು ಟಿಪ್ಪೂ ಸುಲ್ತಾನನ ವಂಶದವರು. ಶೂರರು. ಆದುದರಿಂದ ಕಠಾರಿಯೆ ನಮ್ಮ ರುಜುವಿನ ಗುರುತು.

'ಇವರ ಸಂತೋಷವನ್ನು ನೋಡಿ ನನಗೆ ಹೊಟ್ಟೆಕಿಚ್ಚಾಗುತ್ತದೆ.'



# ಜನಾಂಗದ ವಿಕಾಸ.



ಆರಂಭದಲ್ಲಿ ಮನುಷ್ಯನು ಹೊಟ್ಟೆಯ ಸಲುವಾಗಿ, ಅವ್ಯಾಹತವಾಗಿ ಒಂದಿಲ್ಲೊಂದು ಹೋರಿಯನ್ನು ಕೈಕೊಳ್ಳಬೇಕಾಯ್ತು; ಹೋರಾಡುವದನ್ನು ಕಲಿತನು; ಉದ್ಯೋಗಿಯೂ ಆದನು. ದನಗಾರಿಕೆ, ಒಕ್ಕಲತನದ ಕಾಲದಲ್ಲಿ ಆಹಾರದ ಚಿಂತೆಯು ಎಷ್ಟೋ ಮಟ್ಟಿಗೆ ಕಡಿಮೆಯಾದ ಹಾಗೆ ಬಿಡುವು ದೊರೆಯಲಾರಂಭಿಸಿತು. ಬಿಡುವಿನಲ್ಲಿ ಬುದ್ಧಿಯು ಚಿಗುರಿತು; ಪ್ರತಿಭೆಯು ಉದಯವಾಯಿತು. ಸಂಗೀತ, ಸಾಹಿತ್ಯ ಕಲೆಗಳು ವೊಳೆಯಲಾರಂಭಿಸಿದುವು. ಧಾರ್ಮಿಕ ವಿಚಾರಗಳು ಅಂಕುರಿಸಹತ್ತಿದುವು. ತುರುಕಾರ (ಗೋವಳ) ನ ಕೊಳಲು, ಸುಗ್ಗಿಯ ಕುಣಿತ, ಹಂತಿಯ ಹಾಡುಗಳು ಹಳ್ಳಿಗರ ಹೃದಯದಿಂದ ಕಾಲಕಾಲಕ್ಕೆ ಉಕ್ಕಿ ಉಕ್ಕಿ ಬರಲಾರಂಭಿಸಿದುವು. ಜಗತ್ತಿನ ಎಲ್ಲ ಜನಾಂಗಗಳ ಆರಂಭದ ಸಾಹಿತ್ಯವು ಇದೇ ಬಗೆಯದು. ಈ ಬಗೆಯ ಸಾಹಿತ್ಯದಲ್ಲಿ ಆಯಾ ಸಮಾಜದ ಆರಂಭದ ಸ್ಥಿತಿಯು ಜೀವನ ಚಿತ್ರವು ಒಡಮೂಡಿದುದನ್ನು ಕಂಡುಕೊಳ್ಳಬಹುದು. ಆದುದರಿಂದ ಪ್ರಾಚೀನ ಇತಿಹಾಸ ಸಂಶೋಧನೆಯ ಕಾರ್ಯದಲ್ಲಿ ಹಳ್ಳಿಗರ ಹಾಡು, ಕಥೆ, ಪ್ರಾಚೀನ ವಸ್ತುಗಳು, ಪರಂಪರೆ ವೊದಲಾದವುಗಳೆಲ್ಲವೂ ಮಹತ್ವದ ಸಾಧನಗಳಾಗಿವೆ. ಇವುಗಳನ್ನರಿಯದೆ ಯಾವದೊಂದು ಜನಾಂಗದ ಸಂಪೂರ್ಣ ಇತಿಹಾಸವನ್ನು ಅರಿತುಕೊಳ್ಳುವುದೇ ಸಾಧ್ಯವಿಲ್ಲ.

ತೋಟ-ಪಟ್ಟಿಗಳೂ ಹೊಲಗಳೂ ಊರ್ಜಿತ ಸ್ಥಿತಿಗೆ ಬಂದ ಬಳಿಕ ಪಟ್ಟಿ (ಪಟ್ಟಿ) ಗಳೇ ಪಟ್ಟಣಗಳಾದವು. ಕೂಡುವಸಿಂದ ಬಣಜಿಗನು ಮುಂದಾದನು. ಇವನೇ ಈಗ ಶ್ರೇಷ್ಠ. ನಾಗರಿಕತೆ ತಲೆದೋರಿತು. ಸಂಸ್ಕೃತಿಯ (Culture) ಪ್ರವಾಹವು ನಾಗರಿಕತೆಯಲ್ಲಿ (Civilzation) ಬಂದು ಕೂಡಿತು. ಉಪನಿಷತ್ತುಗಳು ಅದಕ್ಕಿಂತಲೂ ಒಂದಡಿ ಮುಂದಿಟ್ಟು ಮಾನವ್ಯ (Humanism) ದ ಮಹಾಮಂತ್ರವನ್ನು ಜಗತ್ತಿಗೆ ಅರುಹಿದುವು. ಆದರೆ ಪ್ರಪಂಚದ ರಾಷ್ಟ್ರಗಳು ತಮ್ಮೊಡನೂ ಇವೇ ಹೆಗ್ಗುರಿಯೆಂದು ಈಗ ಒಪ್ಪಿಕೊಳ್ಳುವ ವಿಚಾರ ನಡಿಸಿವೆ! ಹೀಗಿದು ಇಲ್ಲಿಯ ತನಕ ಮುಗ್ಗರಿಸುತ್ತ ಮೇಲೇಳುತ್ತ ಮಾನವನು ಮಾಡಿಕೊಂಡ ಪ್ರಗತಿಯ ಇತಿಹಾಸವು.

ಪ್ರಗತಿಯಲ್ಲಿಯೇ ಪರಾಗತಿಯ ಕಾಲ್ತೊಡಕೂ ಇದ್ದು ಬಿಟ್ಟಿದೆ. ಆದುದರಿಂದ ಅವಿಚ್ಛಿನ್ನವಾದ ಪ್ರಗತಿಯೆಂಬುದು ಅಸಾಧ್ಯವಾಗಿದೆ. ಅಶೋಕನು ಅಹಿಂಸಾಧರ್ಮವನ್ನು ತ್ರಿಕರಣಪೂರ್ವಕವಾಗಿ ಆಚರಿಸಿದನು. "ಜಗತ್ತಿನಲ್ಲಿ ಇಂತಹ ಮಹಾರಾಜನು ಇನ್ನೂ ಆಗಿಲ್ಲ; ಈತನು ಜಗತ್ತಿಗೇ ಆದರ್ಶ"ನೆಂದು ಯುರೋಪಿಯ ವಿದ್ವಾಂಸರೂ ಹೊಗಳುವರು. ಆದರೆ ಆ ಕಾಲಕ್ಕೆ ಪ್ರಪಂಚದ ಇನ್ನುಳಿದ ರಾಷ್ಟ್ರಗಳಿಗೆ ಅಹಿಂಸಾವ್ರತದ ಗಂಧವೂ ಇದ್ದಿಲ್ಲ. ಹಿಂದೂ ದೇಶದ ಅಂತಹರ ಬಾಯ್ಗೆ ತುತ್ತಾಯಿತೆಂದು ಕೆಲವು ಇತಿಹಾಸಜ್ಞರ ಅಭಿಪ್ರಾಯವಿದೆ. ಸಾಮೂಹಿಕ ಪ್ರಗತಿಗಾಗಿ, ಒಂದು ವ್ಯಕ್ತಿಗೆ, ಸಮಾಜಕ್ಕೆ; ಇಲ್ಲವೆ ರಾಷ್ಟ್ರಕ್ಕೆ ಅದರ ಮನದ ಇಷ್ಟದಂತೆ ಲಗುಬಗೆಯಿಂದ ಮುಂದೋಡುವುದಕ್ಕಾಗದೆ, ತಡೆದು ನಿಲ್ಲಬೇಕಾಗುವವುದು, ಎಷ್ಟೋಸಾರೆ ಹಿಂದೆ ಬೀಳಬೇಕಾಗುವ ಸಂದರ್ಭವೂ ಇದೆ. ಆದುದರಿಂದ ವೈಯಕ್ತಿಕ ಸ್ವಾತಂತ್ರ್ಯ, ವೈಯಕ್ತಿಕ ಸುಖಗಳು ಕೇವಲ ತಾತ್ಕಾಲಿಕ; ಕ್ಷಣಿಕ ಸಾಮೂಹಿಕ ಪ್ರಗತಿಯಾಗುವವರೆಗೆ ವೈಯಕ್ತಿಕ ಪ್ರಗತಿಗೆ ಸ್ಥೈರ್ಯವುಂಟಾಗಲಾರದು.

ಸ್ವಾಭಿಮಾನವಿಲ್ಲದ ಜಾತಿಯಿಲ್ಲ; ಜನಾಂಗವಿಲ್ಲ. 'ಅಂ'-'ಹಂ' ಎಂಬುದು ಮನುಷ್ಯನೊಡನೆಯೆ ಹುಟ್ಟಿವೆ. ಆದರೆ ಇದರಲ್ಲಿ ಒಂದು ದುರ್ದೈವದ ಸಂಗತಿ: ಪ್ರತಿಯೊಂದು ವ್ಯಕ್ತಿ, ಜಾತಿ, ಜನಾಂಗವು ತಾನು ಮಾತ್ರ ಮೇಲು; ಉಳಿದವರು ಕೀಳು ಎಂದು ಹೇಳುವ ಪ್ರವೃತ್ತಿಯುಳ್ಳುದಾಗಿದೆ! 'ಜನ್ಮ ಜನ್ಮಾಂತರದಲ್ಲಿ ಪುಣ್ಯ ಮಾಡಿ ನಮ್ಮ........... ಲ್ಲಿ ಹುಟ್ಟಬೇಕು ಎಂದೇ ಎಲ್ಲರು ಹೇಳುವುದು! ತಮ್ಮ ಜಾತಿ, ತಮ್ಮ ಧರ್ಮದವರು ಮಾತ್ರ ಸ್ವರ್ಗ-ಮೋಕ್ಷಗಳಿಗೆ ಅಧಿಕಾರಿಗಳು; ಉಳಿದವರು ನರಕಭಾಜನರು! ಈ ಬಗೆಯ ಅವಿಚಾರತನವೂ ಮಾನವ ಕುಟುಂಬದ ಪ್ರಗತಿಯಲ್ಲಿ ಅಡಿಗಡಿಗೆ ಅಡ್ಡ ಬರುತ್ತಲಿದೆ. ಸ್ವಲ್ಪ ಅಧಿಕಾರ, ಸಂಪತ್ತುಗಳು ಪ್ರಾಪ್ತವಾಗುತ್ತಲೆ ಮನುಷ್ಯನು ತನ್ನ ಮೂಲ ಸ್ಥಿತಿಯನ್ನು ಮರೆಯಲಾರಂಭಿಸುತ್ತಾನೆ; ತಾನು, ತನ್ನ ಕುಲ, ತನ್ನ ಜಾತಿಗಳು ದೇವಾಂಶ ಸಂಭೂತವೆಂಬ ಭ್ರಾಂತಿಯನ್ನುಂಟುಮಾಡಿಕೊಂಡು ಉಳಿದ ಜಗತ್ತಿಗೂ ಆ ಭ್ರಮೆಯಲ್ಲಿಡಲು ಪ್ರಯತ್ನಪಡುತ್ತಾನೆ! ಆದರೆ ನಮ್ಮಲ್ಲಿ ಒಂದು ತುಂಬ ಹುರುಳುಳ್ಳ ನಾಣ್ಣುಡಿಯಿದೆ; ಋಷಿಯ ಕುಲ, ನದಿಯ ಮೂಲವನ್ನು ನೋಡಬಾರದೆಂದು ಹಿರಿಯರು ಹೇಳುವರು. 'ನದಿಯ ಮೂಲ' ವೆಂಬಲ್ಲಿ "ಜನಾಂಗದ ಮೂಲ" ವೆಂದು ಸ್ವಲ್ಪ ಬದಲಿಸಿಕೊಂಡರಾಯ್ತು. ಈ ಲೋಕೋಕ್ತಿಯಲ್ಲಿ ನಮ್ಮ ಪೂರ್ವಜರ ಅನುಭವವು ಬಹಳ ಚೆನ್ನಾಗಿ ಸಂಗ್ರಹಿಸಲ್ಪಟ್ಟಿದೆ. ನದಿಯ ಪ್ರವಾಹವು ದೊಡ್ಡದಾಗಿರುವ ಸ್ಥಳದಲ್ಲಿರುವ ಸೌಂದರ್ಯವು ಉಗಮಸ್ಥಾನದಲ್ಲಿರುವದಿಲ್ಲ.

ಒಂದೇ ಜನಾಂಗದಲ್ಲಿಯೆ ಹಲವು ಕಾರಣಗಳಿಂದ ಎಷ್ಟೋ ಸಣ್ಣ ದೊಡ್ಡ ಪಂಗಡಗಳಾಗುವದುಂಟು. ನಾಡುಗಳು ಬೇರೆ ಬೇರೆಯಾಗಿ ಅವರ ಧಾರ್ಮಿಕ, ಸಾಮಾಜಿಕ ಆಚಾರ ವಿಚಾರಗಳಲ್ಲಿ ಅಲ್ಪಸ್ವಲ್ಪ ಹೆಚ್ಚುಕಡಿಮೆಗಳು ಆಗುತ್ತಲೆ ಆ ಗುಂಪುಗ

ಳಲ್ಲಿದ್ದ ಪರಸ್ಪರ ಸಂಬಂಧವು ಕಡಿದು ಹೋಗಿ ಅವರು ತಮ್ಮ ತಮ್ಮ ಜಾತಿಗಳು ಸ್ವತಂತ್ರವೆಂದೇ ಭಾವಿಸಕೊಳ್ಳಲಾರಂಭಿಸುವರು; ತೆಂಕ, ಬಡಗ, ಮುಲಕನಾಡು, ಮೊದಲಾದುವು ಈ ಬಗೆಯ ಉದಾಹರಣಗಳು. ಉಪಜೀವನದ ಉದ್ಯೋಗಭೇದದಿಂದಲೂ ಒಂದೇ ಪಂಗಡದಲ್ಲಿಯೆ ಒಳ ಬಣಗಳಾಗಿವೆ; ಕಲ್ಲು ಒಡ್ಡರು, ಮಣ್ಣು ಒಡ್ಡರು ಇದಕ್ಕೆ ನಿದರ್ಶನ. ಬೇರೆ ತತ್ವಜ್ಞಾನದ ಕಡೆಗೆ ಒಲಿಯುವದರಿಂದಲೂ, ಆ ಧರ್ಮವನ್ನು ಸ್ವೀಕರಿಸುವದರಿಂದಲೂ ಜಾತಿಗಳಾಗಿವೆ. ಬ್ರಾಹ್ಮಣರಲ್ಲಿಯ ಸ್ಮಾರ್ತ, ವೈಷ್ಣವ, ಶ್ರೀವೈಷ್ಣವಾದಿ ಭೇದಗಳು ಇದಕ್ಕೆ ಸಾಕ್ಷಿ. ಒಂದು ಧರ್ಮದವರೆಲ್ಲ ಒಂದೇ ಜನಾಂಗ (race) ದವರೇ ಇರುತ್ತಾರೆಂದು ನಿಶ್ಚಿತವಾಗಿ ಹೇಳಲಿಕ್ಕಾಗುವದಿಲ್ಲ. ಜನಾಂಗವೆಂಬುದು ಜಾತಿ, ಧರ್ಮಗಳಿಂದ ಭಿನ್ನವಾದುದು. ಜನಾಂಗವೆಂದರೆ ಸಾಮಾನ್ಯವಾಗಿ ತೀರ ಆರಂಭಕಾಲದಲ್ಲಿ ಒಟ್ಟಿಗೆ ಇದ್ದು ಬೆಳೆದ ಒಂದು ಮನುಷ್ಯ ಸಮಾಜ. ಈ ಬಗೆಯ ಕೆಲವು ಜನಾಂಗಗಳು ಪ್ರಾಚೀನ ಕಾಲದಲ್ಲಿ ಇದ್ದುವೆಂದು ಬಲ್ಲವರು ಹೇಳುವರು. ಆರ್ಯಜನಾಂಗ, ನಿಗ್ರೋಜನಾಂಗ, ಮೊಂಗೋಲಿಯನ ಜನಾಂಗ ಇತ್ಯಾದಿ. 'ಜನಾಂಗ' (Race) ಎಂಬರ್ಥದಲ್ಲಿ ವಂಶವೆಂಬ ಶಬ್ದವನ್ನೂ ಬಳಿಸಬಹುದು. ಬೌದ್ಧ ಧರ್ಮದಲ್ಲಿದ್ದವರೆಲ್ಲ ಒಂದೇ ಜನಾಂಗ (Race) ದವರೆಂದು ಭಾವಿಸಲಿಕ್ಕಾಗದು. ಅದರಂತೆ ವೀರಶೈವ ಮತದಲ್ಲಿ ಬೇಕಾದ ಜನಾಂಗದವರೂ ಶಿವಶರಣರಾಗಿ ಅತಿವರ್ಣ ಷಡಾಶ್ರಮಿಗಳಾಗಿ ದೀಕ್ಷೆಯನ್ನು ಪಡೆಯಬಹುದು. ಆದುದರಿಂದ ಒಂದು ಧರ್ಮದವರೆಲ್ಲ ನಿಶ್ಚಿತವಾಗಿ ಒಂದೇ ಜನಾಂಗಕ್ಕೆ ಸೇರಿದವರಿರುತ್ತಾರೆಂದು ಗ್ರಹಿಸಲಾಗದು.



# ಪರಿಚಯ.

ಕನ್ನಡನಾಡು ಕಾವೇರಿಯಿಂದ ಗೋದಾವರಿಯುವರೆಗೆ ಇದ್ದಿತೆಂದು ನೃಪತುಂಗನು ಹೇಳಿದರೆ ಕನ್ನಡಿಗರ ಮೂಲ ನರ್ಮದೆಯ ಹತ್ತಿರವೆಂದೂ ಕಂನಾಡು, ಕಂನುಡಿಗಳೇ ಸರಿಯಾದ ಶಬ್ದಗಳೆಂದೂ ಹೇಳಿ ನುಡಿಯ ಹುಟ್ಟನ್ನು ಹುಡುಕುತ್ತಿರುವ ಶಂ. ಬಾ. ಜೋಶಿಯವರ ಹೆಸರನ್ನು ಕೇಳದವರು ವಿರಳ. ಧಾರವಾಡದಲ್ಲಿ ಮಾಧ್ಯಮಿಕ ಶಾಲೆಯೊಂದರಲ್ಲಿ ಶಿಕ್ಷಕರಾಗಿ ಈಗ ನಿವೃತ್ತರಾಗಿದ್ದಾರೆ. ಭಾಷಾಶಾಸ್ತ್ರ ಮತ್ತು ಇತಿಹಾಸಗಳಲ್ಲಿ ತುಂಬಾಯನ್ನು ನಡೆಸಿದ್ದಾರೆ. ಅದರ ಫಲವೆ ಕನ್ನಡದ ನೆಲೆ, ಕನ್ನಡದ ಜೀವಾಳ, ಸಂಶೋಧನೆ ಮಹಾರಾಷ್ಟ್ರದ ಮೂಲ, ಕರ್ನಾಟಕದ ವೀರ ಕ್ಷತ್ರಿಯರು ಮೊದಲಾದ ವಿಚಾರ ಪ್ರಚೋದಕ ಗ್ರಂಥಗಳು ಇತ್ತೀಚೆಗೆ ವಿದ್ಯಾರ್ಥಿಗಳಿಗಾಗಿ ನೀತಿ ಶಿಕ್ಷಣದ ದಾರಿಯಂಬುತ್ತಿ, ಅಸಂತೋಷವೇ ಏಳ್ಗೆಯ ಮೂಲ, ಮೊದಲಾದ ಕಿರಿಹೊತ್ತಿಗೆಗಳ ಮಾಲೆಯನ್ನು ಪೋಣಿಸುತ್ತಿದ್ದಾರೆ.

ಇವರ ಶೈಲಿ ತಿಳಿಯಾದುದು. ವಿಚಾರ ತರ್ಕಬದ್ಧವಾದುದು. ಮಾತು ಮಾರ್ಮಿಕವಾದುದು. ಕರ್ನಾಟಕ ವೀರಕ್ಷತ್ರಿಯರು ಎಂಬ ಗ್ರಂಥದ ಮುನ್ನುಡಿಯಿಂದ ಇಲ್ಲಿಯ ಭಾಗವನ್ನು ಆಯ್ದುಕೊಳ್ಳಲಾಗಿದೆ.

## ಅಭ್ಯಾಸ

೧ ಸಂಗೀತ ಸಾಹಿತ್ಯಗಳ ಹುಟ್ಟನ್ನು ಲೇಖಕರು ಹೇಗೆ ಪ್ರತಿಪಾದಿಸಿದ್ದಾರೆ.

೨ ಜಾತಿಗಳ ಗೊಂದಲವು ಅನರ್ಥಕ್ಕೆ ಹೇಗೆ ಕಾರಣವಾಗುತ್ತದೆ?

೩ ಧರ್ಮ ಮತ್ತು ಜಾತಿ ಇವುಗಳ ಸೂಕ್ಷ್ಮವಾದ ಭೇದವು ಯಾವದು? ಅದನ್ನು ತಿಳಿಯದಿರುವದರಿಂದ ಸಮಾಜಕ್ಕೆ ಯಾವ ಕೇಡಾಗುತ್ತದೆ?

೪ ಜನಾಂಗವೆಂದರೇನು? ಜಗತ್ತಿನಲ್ಲಿಯ ಮುಖ್ಯ ಜನಾಂಗಗಳಾವವು?

೫ ಪ್ರಗತಿಯೆಂದರೇನು? ಮಾನವ ಇತಿಹಾಸದಲ್ಲಿ ಪ್ರಗತಿಯ ಮೆಟ್ಟಲುಗಳು ಯಾವವು?

೬ **ಸ್ಪಷ್ಟೀಕರಿಸಿರಿ:—**

(ಅ) 'ಪ್ರಗತಿಯಲ್ಲಿಯೆ ಪರಾಗತಿಯ ಕಾಲ್ತೊಡಕೂ ಇದ್ದು ಬಿಟ್ಟಿದೆ.'

(ಬ) ಸಾಮೂಹಿಕ ಪ್ರಗತಿಯಾಗುವ ವರೆಗೆ ವೈಯಕ್ತಿಕ ಪ್ರಗತಿಗೆ ಸ್ಥೈರ್ಯವುಂಟಾಗಲಾರದು.

**ಹೆಚ್ಚಿನ ಓದು.**

'ಮಗಳಿಗೆ ತಂದೆಯ ಓಲೆಗಳು ಎಂಬ ಪುಸ್ತಕದಲ್ಲಿಯ ಮೊದಲನೆ ಓಲೆಗಳನ್ನು ಓದಿರಿ.

# ಅಗ್ರಪೂಜಾ ವ್ಯತಿಕರ.



ಕೊಂಕುಕೊಸರುಗಳಿಲ್ಲದ ಯಾಗಸಮಾರಂಭವು ಪರಿಸಮಾಪ್ತಿಗೊಂಡುದು. 'ದಯೆ ದಮಂ ದಾನಂ ತಪಂ ಶೀಲ' ಮೆಂಬ ಪಂಚಾಂಗಗಳಿಂದೊಡವೆರೆದ ಧರ್ಮತೇಜಸ್ಸು ಧರ್ಮರಾಜನ ಮೆಯ್ಯಲ್ಲಿ ತುಂಬಿತುಳುಕಿ ಕಣ್ಣುಗಳಲ್ಲೊಸರುತ್ತಿತ್ತು. ಸಭಾಭಿಮುಖನಾಗಿ ನಿಂತು ತಲೆವಾಗಿದನು. 'ಪೇಳಿಂ—ಈಸಭೆಯೊಳಗ್ರಪೂಜೆಗಾರ್ ತಕ್ಕವರು' ಎಂದು ಕೇಳಿಕೊಂಡನು. ವಿದ್ವಾಂಸರು, ವೈದಿಕರು, ಆಚಾರವಿಚಾರವೇತ್ತೃಗಳು, ಮನುಜಾಧೀಶ್ವರರು, ಮನ್ನೆಯರು ಮೆಯ್ಗಲಿಗಳೆಂಬವರಿಂದ ತಿರುಳ್ಗೊಂಡ ಮಹಾಸಭೆಯದು. ಕೇಳಿದವನಂತೂ ತಾನೇ ಧರ್ಮರಾಜನು. ಹಾಗಿರುವಲ್ಲಿ ಅದಕ್ಕೆ ಮರುಮಾತುಗೊಡುವದೆಂದರೇನು ಸಾಮಾನ್ಯವೇ ? ಒಂದಿಷ್ಟು ಹೊತ್ತು ಸಭೆ ತಣ್ಣಗಾಗಿತ್ತು. ನಾಯಕರೆಂಬವರ ಮೋರೆಗೆ ಮೋರೆ ತಿರುಗಿತು; ಕಣ್ಣಿಗೆ ಕಣ್ಣು ಕೂಡಿತು; ಹುಬ್ಬಿಗೆ ಹುಬ್ಬು ತಬ್ಬಿತು. ಆದರೂ ಮಾತಿಲ್ಲ. ಮೌನದೇವತೆ ಸಭಾಂಗಣವನ್ನಾಳುತ್ತಿತ್ತು. ಉತ್ತರಾಪೇಕ್ಷಿಯಾದ ಧರ್ಮರಾಜನ ನಸುನಗೆಯೊತ್ತಟ್ಟು: ಉಸಿರಾಡದಿದ್ದ ಸಭೆಯೊತ್ತಟ್ಟು, ಈಯೆರಡನ್ನು ಕಂಡು ಬಗೆಗೊಂಡ ಭೀಷ್ಮನು ಮೆಲ್ಲನೆ ಆಸನದಿಂದೆದ್ದು ನಡುವಣ ಚೌಕಟ್ಟನ್ನೇರಿದನು; ನುಡಿಗಟ್ಟನ್ನು ಬೀರಿ

ಜನು; ಲೋಕಕ್ಕೆಲ್ಲಾ ಬಲಿಯಾಗಿದ್ದ 'ಬಲಿಯಂ ಕಟ್ಟಿದನಾವ'ನು?
ರಕ್ಕಸನು ಸುತ್ತಿಕೊಂಡೆಯ್ದಿದ 'ಈ ಧರಣಿಯಂ ವಿಕ್ರಾಂ
ತದಿಂದಂ ರಸಾತಲದಿಂದೆತ್ತಿದನಾವ'ನು? ಅಂದು ನರಸಿಂಹಾಕಾ
ರದಿಂ ದೈತ್ಯನಂ ಚಲದಿಂ ಸೀಳ್ದವನಾವ'ನು? ಅಬ್ಧಿಮಥನ ಪ್ರಾರಂ
ಭದೋಳ್ ಮಂದರಾಚಲಮಂ ತಂದವನಾವ'ನು? ಈ ಸಭಾಗ್ರ
ಪೂಜೆಗೆ, 'ಆತನೆ ವಲಂ ತಕ್ಕ'ನು, ಪೆರರ್ ತಕ್ಕರೇ—ಎಂದು
ಕಾರಣದೊಡನೆ ತನ್ನ ಸಿದ್ಧಾಂತವನ್ನು ಸೂಚಿಸಿದ ಗಾಂಗೇಯನು
ತನ್ನಾಸನವನ್ನೊಂದಿದನು. ತನ್ನ ಮನದೊಳ್-ಅಚ್ಯುತ್ತಿದಂತೆ
ನುಡಿದ ಹಿರಿಯನ ಮಾತ'ನ್ನು ಯುಧಿಷ್ಠಿರನು ಮನಗೊಂಡನು.
'ಆನಂದಂಬೆರಸು ಅಂತೆ ಗೆಯ್ವೆನೆಂದು' ಪುರುಷೋತ್ತಮಂಗೆ
ಅರ್ಘ್ಯವೆತ್ತಿದನು. ಎತ್ತಿದ ಪಾತ್ರದಿಂದ ಅರ್ಘ್ಯಜಲವು ಬಿಂದು
ಬಿಂದುವಾಗಿ ಸುರಿಯುತ್ತಿತ್ತು. ಸಭಾಸೀನನಾದ ಶಿಶುಪಾಲನ
ಕಣ್ಣಿನಲ್ಲಿ, ಕೋಪಾಗ್ನಿ ಕಿಡಿ ಕಿಡಿಯಾಗಿ ಸಿಡಿಯಲಾರಂಭಿಸಿತು.
ಸಿಡಿಮಿಡಿಯಾದನು; ಉರಿದೆದ್ದನು. 'ಸಭೆಯೊಳಗೆ ಮಹಾಪ್ರಳಯ
ಜಳಧಿ ನಾದದಿಂ'ದ 'ಉಚ್ಚಳಿಸಿದನು. ಧರ್ಮಸುತಾ ಕಳೆಕಳೆ
ಹರಿಗೆತ್ತಿದ ಅನರ್ಘ್ಯದರ್ಘ್ಯಮಂ! ಎಂದು ಆರ್ಭಟಿಸಿದನು. ಪ್ರತಿಭಟಿ
ಸಿದ ಚೈದ್ಯನನ್ನು ನೋಡಿ ಕೆಲವರು ಒಳಗೊಳಗೆ ಹೊಗಳಿದರು;
ಹಲವರು ತೆಗಳಿದರು. ಯುಧಿಷ್ಠಿರನು ಎತ್ತಿದ ತಳಿಗೆಯೊಡನೆ
ಬೆರಗಾಗಿ ನಿಂತನು. ಸಾತ್ವತೀಸುತನ ಮಾತು ಮರುಳ್ಗೊಂ
ಡುದು; 'ಕುರುವೃದ್ಧನೂ ಕುಲವೃದ್ಧನೂ ಆದ ಸರಿತ್ಸುತನು
ತಕ್ಕವನೆಂದು ನೀನು ಮಾತ್ರವೇ ಅಲ್ಲ, ಸಭೆಯೇ ನಂಬಿಕೊಂ
ಡಿತ್ತು, ಎನ್ನುವ. ಆದರೆ, ಒಂದು ನೆನಪಾದರೆ ಒಂಬತ್ತನ್ನು ಮರೆವ
ಮುತ್ತಮುದುಕನವನು. ಹೀಗೆ 'ದೊರೆಗಿಡಿಸಿ ನುಡಿವೊಡೇ'ನು?
ಅದು ಆ ಮುದುಕನ 'ಒಲವರ' ವೆಂದೆಣಿಸಿ ಕಡೆಗಣಿಸಿ ಬಲ್ಲಿವ
ನಾದ ನೀನು ಮನ್ನೆಯರ ಅಭಿಪ್ರಾಯವನ್ನು ಕೇಳಿಕೊಳ್ಳಬೇ
ಕಾಗಿತ್ತಲ್ಲವೆ? ನಿನ್ನ 'ಮನದೊಲವರವೂ ಹಾಗೇ ಆದರೆ ಮನೆ

ಯೊಳ್ ಹರಿಗಗ್ರಪೂಜೆಯ' ನೊಪ್ಪಿಸು. ಅದನ್ನಲ್ಲಗಳೆಯುವವ
ರಾರು ? ಇದು 'ಮನುಜಾಧೀಶ್ವರ ಸಭೆ' ; ಇಲ್ಲಿ 'ನೆನೆಯಲುಂ
ಆಗದ ದುರಾತ್ಮ'ನೀತನು. ಇಂಥ 'ಪಚ್ಚವಸಿಯ ತುರುಕಾರಂಗೆ
ಅಗ್ಗಳಿಕೆಯನೆ ಮಾಡಿ' ನೀನೂ 'ಭೂಪರಿಸಿಸರ ಕೊರಲ'ಲ್ಲಿ ಪಳಿ
ಯಂಕಟ್ಟಿದೆಯೋ !' ಕಾಲದೋಷವು ಕಣ್ಣನ್ನು ಕುರುಡಾಗಿಸಿ
ತೆಂದು ತೋರುತ್ತಿದೆ. 'ದೇವರನಡಿಗೆರಗಿಸಿದ ಸಕಲಾವನಿತಳದ
ಅದಟರಂಪಡಲ್ವಡಿಸಿದ,' ನಾನೇನು ನಿನ್ನ ಈ ತಮ್ಮಂದಿರ ತೋಳ್ಗಳ
ದೊಳಗೆ ನುಸುಳಿ ನುಗ್ಗಾದವನೆಂದು ಭಾವಿಸಿ ಬಿಟ್ಟೆಯಾ ? ಬಿಡು
ಆ ಭ್ರಮೆಯನ್ನು. ಯುಧಿಷ್ಠಿರನ ಪುಣ್ಯಕಾರ್ಯದಲ್ಲಿ ನೆರವಾಗತಕ್ಕು
ದೆಂಬ ಧರ್ಮಬುದ್ಧಿಯಿಂದಷ್ಟೆ ಕಷ್ಟವನ್ನು ಕಳುಹಿದೆನೆಂಬುದನ್ನು
ನೆರಗಿನಲ್ಲಿ ಗಂಟಿಕ್ಕು. ಅಂಥ ಸದ್ಭಾವನೆಯ 'ಕಾರ್ಯಾವಷ್ಟಂಭದ'
ನನ್ನ ಕಣ್ಣೆದುರಿನಲ್ಲಿಯೂ ಈ 'ಗೋವಳಿಗಂಗೆ—ಅಗ್ರಪೂಜೆಯಂ
ನೀಂ ಕುಡುವೆಯ ? ಇಂಥ ಯಜ್ಞದಿಂದೊದಗುವ ಫಲವಾದರೂ
ಏನು ?—ಮೊದಲು ಅಮೃತವನ್ನು ತಣಿಯುಂಡು 'ಗೋಮೂತ್ರ
ದಿಂದೆ ಬಾಯ್ಪೂಸಿದಂ'ತಾಗುವದೆ ? ಹೀಗೆಂದರೂ ಯುಧಿಷ್ಠಿ
ರನ ಮುಖದಲ್ಲಿ ಮಾರ್ಪಾಟುಗಾಣದೆ ಸಭೆಯತ್ತ ಕಣ್ಣನ್ನುರುಳಿಸಿ
ದನು. ಕೊಡಹೇಳಿದವನ ಕೊಡುವವನ ಕೊಡುವಲ್ಲಿ ಪಡೆವವನ
ಮೋರೆಗಳನ್ನೀಕ್ಷಿಸಿರಿ. ಇವರ 'ಪೆಂಪೇಂ ನೆಗಳ್ತೆ' ಪಡೆವುದೊ !
ಇರಲಿ; ' ಪೇಳ್ವಂ ಕುಡುವೇಳ್ಗಲಿ, ಕುಡುವಣ್ಣಂ ಕುಡಲಿ' 'ಕುಡೆ
ಕೊಳ್ವ' ಕಲಿಯನ್ನರಿತುಕೊಳ್ಳದೆ ಸುಮ್ಮನೆ ಬಿಡುವೆನೆ ?—ಎಂದು
ಗಜರಿದ 'ಗೀರ್ವಾಣಾರಿಯು ಸುರಾರಿ' ಸಭಾಮುಖನಾದನು. ಗುಡುಗಿ
ನಂತೆ ನುಡಿಗುಟ್ಟಿದನು.

ಮುದುಕನ ಮಾತಿಗೆ ಮುಂಕಾಗಿ ' ನಿನಗೆ ಯುಧಿಷ್ಠಿರನು
ಅರ್ಘ್ಯವ ' ನೆತ್ತಿದರೆ ಎತ್ತಿಕೊಳ್ಳಲಿ. ನಿನ್ನ ಆಸೆಯೂ ಕುಲದಂತೆ
ಮಲಿನವಾಗಬಹುದೆ ! ಇದೋ ' ಶಂಖದೋಳ್ ಪಾಲೆರೆದಂತೆ
ಮಲಿನಮಿಲ್ಲದ—ಒಳ್ಗುಲದ ಅರಸುಗಳಿ'ರುವಲ್ಲಿ ' ನೀನುಂ—

ಅಗ್ರಪೂಜೆಯನ್ನೊಂಮವುದೆ? ' ಆದರೆ 'ಮತ್ಸನ್ನಿಧಿಯೊಳ್' 'ಯಮತನಯ' ನು 'ಕುಡುವಗ್ರಪೂಜೆ' ಯೆಂಬುದು 'ನಿನಗೆ ಶನಿಯ' ಪೂಜೆ, 'ಮಿಳ್ತುವಿನೋಜೆ,' 'ಸಂಜೆನ' ಹೂಜೆ, ಎಂದೆಣಿಸು. 'ಮನೆ ನಿನಗೆ ನಂದ ಗೋಪಾಲನ ಮನೆ; ತುರುಗಾರ್ತಿ ನಿನಗೆ ಮನೆಪೆಂಡಿತಿ; ಪಚ್ಚನೆ ಪಸಿಯ ಗೋವನ್ನೈ ನೀನು, ಎಂಬುದೇನು ಮನಸ್ಸಿನಿಂದ ಮಾಸಿಹೋಯಿತೆ' ಅದೇನು?—ಉದ್ದುಬ್ಬಿದರೆ ಮದ್ದಳೆಯಾಗುವದೆ? 'ಪುರನಡಸಿ ಪಿಡಿದು ಕಟ್ಟಿದ ಪರಿಭವಮಂ ಮರದೆ' ಯೇನು? ಮರೆತರೆ 'ನಿನ್ನ ಪೆಡಗಯ್ಗಟ್ಟಂ ಶರದಿಂ ಬಿಡಿಸಿದ' ಈ ಗಾಂಗೇಯನನ್ನೂ ಮರೆತೆಯಾ? ಛೀ, ಮುಪ್ಪಿನ ಭ್ರಾಂತನಲ್ಲವಾದರೆ ಗಾಂಗೇಯನೇ ಅಂಥ ಹೇಡಿಗೆ ಅಗ್ರಪೂಜೆಯನ್ನೀಯಬೇಕೆನ್ನುವನೆ ? ಅದಿರಲಿ; ಕಾಲಯವನನಿಗೆ ಹೆದರಿ 'ಮುಚುಕುಂದನೆಂಬವನ ಮರೆವೊಕ್ಕುದ'ನ್ನು 'ಜರಾಸಂಧಂಗಂ ಬಿರುತು-ಓಡಿದುದ' ನ್ನು ನೀನು ಮರೆತರೂ ಭೂತಳಂ-ಅರಿಯದೆ?' ಯಾವುದು ಹೇಗಾದರೂ ಆಗಲಿ, 'ನೆನೆ ನನೆಯಲವೋ, ಗೋವುಗಾದುದು ಪುಸಿಯೋ' ಹೇಳು. 'ಮೊನ್-ಅವೆ ಪಂದಿಯೆಂದು-ಎನಿತಾನುಂ ತೆರದಿಂದೆ ಡೊಂಬವಿದ್ದೆಯನಾಡಲ್ ನೀನರಿವೆ'! 'ನಿನ್ನ ನಿಲ್ಲಿದೆಸೆವಲಿಗೆಯ್ಯ'ಲು ನಾನರಿವೆನು. ಹೋಗಲಿ; ಅರಿಯದಿದಂ ಮಾಡಿದೆ'ನು; : ಎನ್ನರಿಯಮಿಕೆಗೆ ಸೈರಿಸು ಎಂದು ಸಭೆಯೊಳ್ ಕಾಲ್ಗೆರಗು ಎರಗು. ಕೊಲ್ಲೆ'ನೆಂದು ಶಿಶುಪಾಲನಾರ್ಭಟಿಸಿದನು.

ಸಭೆಯೊಳಗೆ ಒಬ್ಬರೂ ಮಿಟ್ಟೆಂದು ಮಿಡುಕಲಿಲ್ಲ. ಅದನ್ನವಧರಿಸಿದ 'ನಾರಾಯಣಂ ಶಿಶುಪಾಲನ'ನ್ನವಲೋಕಿಸಿದನು; ನಸುನಕ್ಕನು. 'ನಿನ್ನಯ ತಾಯಾ'ದ ಸಾತ್ವತಿ ಶಿಶುವಾಗಿದ್ದ 'ನಿನ್ನಂ ತಂದೆನ್ನ ತೊಡೆಯ ಮೇಲಿ'ಟ್ಟುದನ್ನು, ಒಡನೆ 'ನಿನ್ನ ಲಲಾಟದ ಕಣ್ಣದು' ಮಾಸಿಹೋದುದನ್ನು, ಮುನಿಗಳಿಂದಂತೆ ನಿನ್ನ ಮೃತ್ಯುವೆನ್ನಯ ಕೈಯ್ಯೊಳ್ ನೆರೆದು'ದೆಂದು ಆಕೆ

ಬಾಯ್ಬಿಟ್ಟಿದನ್ನು 'ಈ ಕಿರಿಯುವನರಿಯದೆ ಕೆಡೆ ನುಡಿದನಪ್ಪೊಡಂ ನೂರುವರಂ' ಸೆರಿಸುವುದೆಂದಾಕೆ ಬೇಡಿದುದನೆಲ್ಲ ನೀನರಿಯದಿದ್ದರೂ ನಾನೆಂತು ಮರೆಯುವದು? ಬಯ್ ಬಯ್ ನೂರಾಗಲಿ!— ಎಂದೊಮ್ಮೆ ಗಾಂಗೇಯ ದುರ್ಯೋಧನಾದಿಗಳ ಮುಖವನ್ನು ನೋಡಿದನು. 'ನೂರುವರಂ ಮುನಿಯಲೆನಗಾಗದು; 'ಗಾಂಗೇಯ ನಿರ್ದಂ-ಇರ್ದಂ ಘಟೋದ್ಭವ'ನು; 'ನೆಗಳ್ದ ಪೃಥಾತನಯರುಂ-ಇರ್ದರು; 'ದುರ್ಯೋಧನಂ-ಇರ್ದ'ನು; ಆ ಬಲ್ಲವರೊಡನೆ ಕೇಳು; ಹೇಳುವರು, .ಎಂದು ಸುಮ್ಮನಾದನು.

ಅದನ್ನು ಕೇಳಿ ಕೆರಳಿ, 'ಬಾಯ್ಗಂ ಬಂದನಿತುಮಂ-ಅಮರಾರಿ ಬಯ್ದ'ನು ನೂರೆಂಬನಿತುವರಂ' ಅಸುರಾರಿ 'ನಸುಕಿನಿಸದೆ ಮನ್ನಿಸಿ'ದನು. ನೂರಾದೊಡನೆ 'ನಸುಕಿನಿಸಿ, ತನಗಪ್ಪೆರ್ಗೆ ಮೊತ್ತಿದ ತಳಿಗೆಯೊಳಿ'ಟ್ಟನು. 'ತಿರಿದ ತೆರದೆ ತಲೆ ಪರಿದು'ದು!- ತಳಿಗೆಯ ಮೇಲೆ ಕಳಕಳಿಸಿ ನಗುತುಮಿರ್ದುದು ! ತಳಿಗೆಯದು ಯಮನಿಗೆಂದೆತ್ತಿದ ಹಣ್ಣು ಕಾಯಿಗಳ ತಳಿಗೆಯಾಯಿತು. 'ಅದಂ ಕಂಡು-ಅಳಲ್ದು ಆತನ ನಂಟರಪ್ಪ ಅಶ್ವಗ್ರೀವ ಪಿದ್ಯುನ್ಮಾಲಿ ನೀಲಾದಿಗಳಪ್ಪ ಪ್ರಭುಗ'ಳು ಬಂದು ಮುರಾಂತಕನಿಗಿದಿರಾಗಿ, ಮೊಯ್ದೊರೆದರು. ಸಭಾಸ್ಥಾನವು ತಣ್ಣಗಾಯಿತು. ಮುಗಿಲ ಮುಸುಕವು ಗಾಳಿಗೇ ಮಾಸಿಹೋಯಿತು. ಆ ಮೇಲೆ ಯುಧಿಷ್ಠಿರನು 'ಅಗ್ರಪೂಜೆಯಂ ನಾರಾಯಣಂಗೆ ಕೊಟ್ಟು, ಅವಭೃಥಸ್ನಾನವನ್ನೆಸಗಿ 'ಯಾಗ ವಿಧಿಯಂ ನಿವರ್ತಿಸಿದನು. ನೆರೆದ ರಾಜಕುಲವೆಲ್ಲವನ್ನೂ ಮನ್ನಿಸಿ ವಿಸರ್ಜಿಸಿದನು. ಅತ್ತಣ ತಂದೆಯ ಮೊಗರಾಗ, ಇತ್ತಣ ಮಕ್ಕಳ ಮನೋರಾಗ, ನಡುವೆ ನಾರದನ ವೀಣಾರಾಗಗಳೊಡಗೂಡಿದ ಅದೊಂದು ವಿಶಿಷ್ಟ ಸಂಗೀತವು ಏಕತಾನವಡೆದುದು. ಮೊತ್ತಮೊದಲು ಜರಾಸಂಧ ಸನ್ನಿಪಾತವನ್ನು ನಿಪಾತನಗೆಯ್ದು, ಕಟ್ಟ ಕಡೆಗೆ ಶಿಶುಪಾಲರಾಜಯಕ್ಷ್ಮವನ್ನು ನಿರ್ಮೂಲಿಸಿದ ಕೃಷ್ಣನು ಮುಂದಿನ ದುರ್ಯೋಧನನ

ಜ್ವರ ಬಾಧೆಗೆ ಮದ್ದರಿವುದು ಸುಲಭವೆಂದು ನಸುನಗುತ್ತಾ, ಯುಧಿಷ್ಠಿರನನ್ನೀಕ್ಷಿಸಿದನು; ತದನಂತರ ಕೆಲ ದಿವಸವಿದ್ದು ದ್ವಾರಾವತಿಗೆಯ್ದಿದನು. ಅನುಜರಿಂದೊದಗಿದ 'ರಾಜಲಕ್ಷ್ಮಿಯ'ನ್ನು ಅವರೊಡನನುಭವಿಸುತ್ತಾ ಧರ್ಮಜನು ಸುಖವಾಗಿದ್ದನು.



# ಪರಿಚಯ.

ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು ಕನ್ನಡ ಮತ್ತು ಸಂಸ್ಕೃತ ಪಂಡಿತರು. ಕನ್ನಡಕ್ಕೊಬ್ಬನೇ ಪಂಪನಿದ್ದಂತೆ, ಪಂಪನನ್ನು ಸಂಪೂರ್ಣವಾಗಿ ಅರಿತುಕೊಂಡವರಲ್ಲಿ ಇವರೊಬ್ಬರೇ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಇವರು ಪಂಪಭಾರತ ಮತ್ತು ಆದಿಪುರಾಣಗಳನ್ನು ಸಾರರೂಪವಾಗಿ ಗದ್ಯದಲ್ಲಿ ಬರೆದಿದ್ದಾರೆ. ಇವೆರಡು ಗ್ರಂಥಗಳು ಮೂಲಗ್ರಂಥಗಳಷ್ಟೇ ಸೊಗಸಾಗಿವೆ. (ಇವರು ಸೆಂಟಎಲೂಸಿಯಸ್ ಕಾಲೇಜದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ.) "ಅಗ್ರಪೂಜಾವ್ಯತಿಕರ'' ಈ ಭಾಗವನ್ನು ಇವರ ಸಮಸ್ತ ಭಾರತಸಾರದಿಂದ ಆಯ್ದುಕೊಂಡಿದೆ.

## ಅಭ್ಯಾಸ

೧ ನೀವು ಓದಿದ ಕತೆಯನ್ನು ತಿಳಿಗನ್ನಡದಲ್ಲಿ ಬರೆಯಿರಿ.

೨ ಧರ್ಮರಾಜ, ಕೃಷ್ಣ ಮತ್ತು ಶಿಶುಪಾಲ ಇವರ ಸ್ವಭಾವವನ್ನು ನಿಮ್ಮ ಶಬ್ದಗಳಲ್ಲಿ ಚಿತ್ರಿಸಿರಿ.

೩ ಈ ಕತೆಯು ಮತ್ತು ಅದನ್ನು ಇಲ್ಲಿ ಹೇಳಿದ ರೀತಿ ಒಂದು ಚಿಕ್ಕ ನಾಟಕಕ್ಕೆ ಒಳ್ಳೆ ವಸ್ತುವಾಗಿದೆ. ಈ ಭಾಗವನ್ನು ನಾಟಕದಂತೆ ಬರೆದು ಅಭಿನಯಿಸಿರಿ. ಅಥವಾ ನಾಲ್ಕರ ಪಾತ್ರಗಳನ್ನು ಪಾಠದಲ್ಲಿಯ ಶಬ್ದಗಳಲ್ಲಿಯೆ ಅಭಿನಯಿಸಿರಿ.

೪ ''ಬಲಿಯಂ ಕಟ್ಟಿದನಾವ'' ಇತ್ಯಾದಿ ಅವತರಣಿಕೆಗಳಲ್ಲಿ ಒಳಗೊಂಡ ಕಥಾಭಾಗವನ್ನು ವಿಸ್ತರಿಸಿ ಬರೆಯಿರಿ.

೫ ಶಿಸುಪಾಲನು ಶ್ರೀಕೃಷ್ಣನನ್ನು ಯಾವ ಶಬ್ದಗಳಲ್ಲಿ ತೆಗಳಿದ್ದಾನೆ? ಇವುಗಳಿಂದ ಸೂಚಿತವಾದ ಸಂದರ್ಭಗಳನ್ನು ತಿಳಿದುಕೊಂಡು ಆಯಾ ಕತೆಗಳನ್ನು ಸ್ವಲ್ಪದರಲ್ಲಿ ಹೇಳಿರಿ.

೬ ಈ ಕತೆಯನ್ನು ಪಂಪಾಭಾರತದಿಂದ ಪರಿವರ್ತಿಸಲಾಗಿದೆ. ಪಂಪನ ಶೈಲಿ ಕನ್ನಡ ಭಾಷೆಯ ಅಡಿಗಲ್ಲಾಗಿದೆ. ಈ ಶೈಲಿಯನ್ನು ಚನ್ನಾಗಿ ಅಭ್ಯಸಿಸಿರಿ. ಅವನು ಉಪಯೋಗಿಸಿದ ಅಚ್ಚಗನ್ನಡ ಶಬ್ದಗಳ ಪಟ್ಟಿಯನ್ನು ತಯಾರಿಸಿರಿ.

ವಿಸ್ತರಿಸಿ ಬರೆಯಿರಿ:- 'ಉದ್ದುಬ್ಬಿದರೆ ಮಳೆಯಾಗುವದೆ ?'

''ತಳಿಗೆಯದು ಯಮುನಿಗೆಂದೆತ್ತಿದ ಹಣ್ಣುಕಾಯಿಗಳ ತಾಳನೆಯಾಯಿತು'' .

**ಕಠಿಣ ಶಬ್ದಗಳು:—**

ಸಿಡಿಮಿಡಿಯಾಗು; ಕಾತರಗೊಳ್ಳು. ಬಲವರ; ಪಕ್ಷಪಾತ. ಕಾರ್ಯ ವಿಷ್ಟಂಭದ; ಕಾರ್ಯಾವಲಂಬನದ. ಅಶನಿ; ಇಂದ್ರನ ವಜ್ರಾಯುಧ-ಕೆಡನುಡಿ ತಿಳಿಗೇಡಿತನದ ಮಾತು. ಅವಭೃಥಸ್ನಾನ; ಯಜ್ಞಾನಂತರ ಯಜ್ಞಕರ್ತೃವು ಯಜ್ಞಪಾತ್ರೆಗಳನ್ನು ಶುದ್ಧಗೊಳಿಸಿ ತಾನು ಶುದ್ಧನಾಗುವ ಸ್ನಾನ.

**ಹಳೆನುಡಿಗಳು:—**

ಪೊರೆಕೆಡಿಸು, ಕುರುಡಾಗಿಸು, ಸೆರಗಿನಲ್ಲಿ ಗಂಟಿಕ್ಕು, ಬಾಯ್ಬಿಡು, ಮೈದೊರೆ, ಇವುಗಳ ಅರ್ಥ ವಿಶೇಷವನ್ನು ಲಕ್ಷಿಸಿರಿ, ಇವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.

**ವ್ಯಾಕರಣ:—**

ಮುನಿಸಗೊಂಡನು. ತುರುಕಾರ ಪಡಲ್ವಡಿಸು ಇವುಗಳ ಸಮಾಸ ಹೇಳಿರಿ. ತುರುಗಾರ್ತಿ, ಆರಿಯುಮಿಕೆ, ಅಪ್ಪೊಡಂ, ನೂರುವರಂ, ಪೇಪು, ಅಗ್ಗಳಿಕೆ, ಗೋವಳಿಗ ಇವುಗಳ ರೂಪಸಿದ್ಧಿಯನ್ನು ಹೇಳಿರಿ.

---

# ಪರಿವಿಡಿ

# ೧. ಬಸವಣ್ಣನವರು ಸಂಗಮೇಶ್ವರನನು ಪೂಜಿಸಿದ್ದು.



ಒಲವಿಂದ ನಡೆತಂದು ಶಿವನಿಳಯಮಂ ಪೊಕ್ಕು
ನಲಿನಲಿದು ನೇಹಮಂಕುರಿಸುತಿರೆ ಕೈಮುಕ್ಕು
ಲಿಂಗ ಶರಣೆನುತಗ್ಘವಣಿಯ ನೂಲವಿಂದಿಳಿಪಿ
ಸಂಗಮೇಶ್ವರನ ಹತ್ತಿರೆ ಹದುಳದಿಂದಿಳಿಪಿ
ಬಸವನೆಳಸಿರ್ದಯ್ಯ ದೇವ ತಳುವಿದೆನೆಂದು
ಉರವಣಿಸಿ ಬರುತಿರ್ದೆ ತಂದೆ ಮುಳಿಯದಿರೆಂದು
ಎನ್ನಯ್ಯ ಎನ್ನರಸ ಎನ್ನ ಬಂಧುವೆ ಎನುತೆ
ಎನ್ನ ಕಣ್ಣು ಗತಿಯೆ ಮತಿಯೆ ಕರುಣಿಪುದೆನುತೆ
ಅಲ್ಲಿ ಕಸ್ತೂರಿಯ ಶ್ರೀಗಂಧಂಗಳಿಂ ಪೊರೆದ
ಸಲ್ಲಲಿತದಿರವಂತಿ ಸಂಪಗೆಗಳಿಂ ಪೊರೆದ
ನುತ ಶೀತಳಂಗಳಂ ಪೊಂಗಳಸದೊಳು ತೀವಿ
ಅತಿಶಯಾನಂದಾಶ್ರುವಂ ಕಣ್ಗೊಳೊಳು ತೀವಿ
ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆರೆವುತಂ
ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತಂ
ಚಂದ್ರಚೂಡಂಗೆ ಸಿರಿಗಂಧಮನಲಂಕರಿಸಿ
ಸಾಂದ್ರ ಸೌರಭ್ಯಮಯ ಪುಷ್ಪದಿಂ ಸಿಂಗರಿಸಿ
ಪೂಜೆಯುಂ ನೋಡಿ ಮೆಚ್ಚದೆ ಪೂಜೆಯುಂ ಮಾಡಿ

ಓಜೆಗೆಟ್ಟಿರುಹುಗೆಟ್ಟಿತಿಲಲ್ಲಿಯಂ ಮಾಡಿ
ನಯನಂಗಳೊಳು ಪೂಜೆ ಬರೆದಂತೆ ನೋಡುತಂ
ಭಯಭಕ್ತಿಯಿಂ ಪೂಜೆ ಮೆರೆವಂತೆ ಮಾಡುತಂ
ಚಿತ್ತದೊಳು ಪೂಜೆಯುಚ್ಛ್ರಿತ್ತಿದಂತರ್ಚಿಸುತೆ
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ
ಧೂಪಧೂಮದ ತಿರುಳ ಪರಿಮಳಮನೊಲಿದಿತ್ತು
ದೀಪದೊಳು ಕಣ್ಬೆಳಗನೆತ್ತಿ ಸುಖಮಂ ಹೊತ್ತು
ರನ್ನದಡ್ಡಣಿಗೆಗಳ ಮೇಲೆ ಬೆಳಗಂ ಕರೆವ
ಹೊನ್ನ ಪರಿಯಾಣದೊಳಗಮೃತಾನ್ನಮಂ ಮೆರೆವ
ನವಘೃತಂ ನವಶಾಕ ಪಾಕಂಗಳಂ ಬಡಿಸಿ
ನವ ಮಧುರರಸಪೂರ್ವ ಪಕ್ವಾನ್ನಮಂ ಬಡಿಸಿ
ನಡುವೆ ಜವನಿಕೆವಿಡಿದು ಪೊರಗೆ ಕೈಮುಗಿದಿರ್ದು
ಕಡುಲಲ್ಲಿಯಿಂ ಭೀತಿಯಿಂ ಭಕ್ತಿಯಿಂದಿರ್ದು
ದೇವ ಚನ್ನನ ನಿಧಿಯೆ ಆರೊಗಿಸಲೆ ಸಂಗ
ದೇವ ಚೋಳನ ಸುಧೆಯೆ ಆರೋಗಿಸಲೆ ಸಂಗ
ಆರೋಗಿಸಯ್ಯ ನಿಜಲಿಂಗ ಸಂಗಮದೇವ
ಆರೊಗಿಸೈ ಉಪಾಧ್ಯಾರ್ಂಗ ಸಂಗಮದೇವ
ಎನ್ನ ಸುಖಸಿಧಿಯೆ ಗುಣನಿಧಿಯೆ ಕೂಡಲ ಸಂಗ
ಎನ್ನ ಭುಜಬಲವೆ ಮನದೊಲವೆ ಕೂಡಲಸಂಗ
ಎಂದು ಕೊಂಡಾಡುತ್ತ(ವಾ)ರ್ರೈಸಲರ್ಪಿಸುತೆ
ಬಂದು ಜವನಿಕೆಯೊಳಗೆ ನಿಂದು ಮನವಿಕ್ಕುತ್ತೆ
ಮೃದುಮೃದಂಗಂ ಬಹಳ ಕಹಳಾರವದ ನಡುವೆ
ಪದೆದು ಪೊಣ್ಮುವ ಶಂಖಭೇರಿರವದ ನಡುವೆ
ತಿಳಿದಗ್ಘವಣಿಯಿತ್ತು ಕೈಘಟ್ಟಿಯುಮನಿತ್ತು
ಬಳಸಿ ಕಂಪಿಡುವ ಕರ್ಪೂರದ ವೀಳಯವಿತ್ತು

ಮಂಗಳಾರತಿಯಿತ್ತು ಚವರಸೀಗುರಿಯಿಕ್ಕಿ
ಅಂಗಜಹರಂಗೆ ಮುಕುರಂ ದೋರಿ ಮೈಯಿಕ್ಕಿ
ನಿಂದಿರ್ದು ಕೈಮುಗಿದು ನೋಡಿ ಕಣ್ಗಳು ತೊರೆಯೆ
ಸಂದಣಿಸಿ ಮೈಯೊಳಗೆ ರೋಮಾಂಚತತಿ ನೆಗೆಯೆ
ಗುರುಸಂಗ ಶಿವಲಿಂಗ ಸತ್ಯಶರಣರ ಸಂಗ
ವರಸಂಗ ಲಿಂಗ ಶರಣಾಗು ಬಸವನ ಸಂಗ
ಕರುಣರಸಸಿಧಿ ಘನತರಂಗ ಸಂಗಮದೇವ
ಗಿರಿಸುತೆಯ ಸಮಸುಖಾಲಿಂಗ ಸಂಗಮದೇವ
ಸುಕುಮಾರ ಶಶಿಕಳಾಚೂಡ ಕೂಡಲಸಂಗ
ಸಕಲ ನಿರ್ಮಾಯಿಕ ಕ್ರೀಡ ಕೂಡಲಸಂಗ
ನಿತ್ಯ ನಿರ್ಮಳನೆ ನಿಃಕಳನೆ ಕೂಡಲಸಂಗ
ನಿತ್ಯ ನಿರ್ಭಯನೆ ನಿರುಪಮನೆ ಕೂಡಲಸಂಗ
ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ
ಸೊಗಯಿಸುವ ಘನವೃಷಾರೂಢ ಕೂಡಲಸಂಗ
ಎನ್ನನತಿ ಕರುಣದಿಂ ನೋಡು ಕೂಡಲಸಂಗ
ಎನ್ನ ಮನದೂಕ್ಕರೊಳು ಕೂಡು ಕೂಡಲಸಂಗ
ಎನ್ನ ಕಣ್ಣೊಳಗೆ ಪರಿದಾಡು ಕೂಡಲಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ

— ಹರಿಹರ



# ಪರಿಚಯ

ಈ ಭಾಗವು ಹರಿಹರ ಕವಿಯು ಬರೆದ ಬಸವರಾಜ ರಗಳೆಯಿಂದ ಉದ್ಧೃತವಾಗಿದೆ. "ಶರಣರ' ರಗಳೆ "ನಂಬಿಯಣ್ಣನ ರಗಳೆ' ಮುಂತಾದ ರಗಳೆಗ್ರಂಥಗಳನ್ನೂ, ಗಿರಿಜಾಕಲ್ಯಾಣವೆಂಬ ಚಂಪೂಕಾವ್ಯವನ್ನೂ, ಪಂಪಾ ಶತಕ, ರಕ್ಷಾಶತಕ, ಎಂಬ ಇತರ ಗ್ರಂಥಗಳನ್ನು ಬರೆದುದಾಗಿ ತಿಳಿದು ಬರುತ್ತದೆ.

ಬಸವರಾಜದೇವರ ರಗಳೆಯ ಅರ್ಧಭಾಗವು ರಗಳೆಯಲ್ಲಿ, ಅರ್ಧ ಭಾಗವು ಗದ್ಯದಲ್ಲಿ ರಚಿತವಾಗಿದೆ. ಶಿವಶರಣರ ಚರಿತ್ರೆಗಳನ್ನು ಇವನು ಬರಿಯ ರಗಳೆಯಲ್ಲಿ ಬರೆದಿದ್ದಾನೆ. ಹೀಗೆ ಇವನು ರಗಳೆಯಲ್ಲಿ ಕಾವ್ಯ-ರಚನೆ ಮಾಡಿದ್ದರಿಂದ ಜನರು ಆತನನ್ನು ರಗಳೆಯ ಕವಿಯೆಂದು ಹಾಸ್ಯ ಮಾಡಿದರೆಂದೂ, ಅದಕ್ಕಾಗಿ ಗಿರಿಜಾಕಲ್ಯಾಣವನ್ನು ಚಂಪೂರೂಪವಾಗಿ ಬರೆದನೆಂದೂ ಐತಿಹ್ಯವಿದೆ.

ಹರಿಹರನು ರಗಳೆಯನ್ನು ಬರೆದದ್ದಕ್ಕಾಗಿ ತಲೆತಗ್ಗಿಸಬೇಕಾಗಿಲ್ಲ. ಗಿರಿಜಾಕಲ್ಯಾಣವನ್ನು ಬರೆಯದೇ ಇದ್ದರೂ ಕನ್ನಡ ಸಾಹಿತ್ಯದಲ್ಲಿ ಅವನಿಗಿದ್ದ ಸ್ಥಾನಕ್ಕೆ ಚ್ಯುತಿಬರುತ್ತಿರಲಿಲ್ಲ.

ಈತನು ಸುಮಾರು ೧೧೬೫ ರಲ್ಲಿ ಇದ್ದನು.

**ಅಭ್ಯಾಸ.**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(ಅ) (೧) ಬಸವೇಶ್ವರನು ದೇವರಿಗೆ ಏನು ಅರ್ಪಿಸಿದನು ?

(೨) ಶಿವಪೂಜೆಯಲ್ಲಿ ನಿರತರಾಗಿದ್ದ ಬಸವಣ್ಣನವರು ಏನು ಬೇಡಿ ಕೊಂಡರು ?

(೩) "ಅತಿಶಯ ಆನಂದಾಶ್ರುವಂ ಕಣ್ಗಳೊಳು ತೀವಿ' ಎಂದು ಕವಿಯು ಏಕೆ ಹೇಳುತ್ತಾನೆ ?

(೪) ಸಂಗಮದೇವನನ್ನು ಕವಿಯು ಯಾವ ಶಬ್ದಗಳಿಂದ ಬಣ್ಣಿಸಿದ್ದಾನೆ ?

(೫) ಕೂಡಲಸಂಗಮನೆಂದು ದೇವನಿಗೆ ಏಕೆ ಹೇಳಲಾಗಿದೆ ?

(ಆ) ಇದು ಯಾವ ಗರಳೆಯಲ್ಲದೆ ? ಅದರ ಲಕ್ಷಣವೇನು ?

## ೨. ಹರಿಶ್ಚಂದ್ರನು ಅಯೋಧ್ಯೆಯನ್ನು ಬಿಟ್ಟು ಹೊರಟುದು

ಘೋರವಡುವ ಭೂಪಾಲನಂ ಕಂಡು, ಕಣ್ಗೆಟ್ಟು
ಮರುಗಿ ಬಸುರಂ ಹೊಸೆದು, ಬಸವಳಿದು ಬಿಸುಸುಯ್ದು
ಮೊರೆಯಿಟ್ಟು, ಬಾಯ್ಬಿಟ್ಟು, ಕೈನೀಡಿ ಕರೆದು ಕೊಟ್ಟೊರಲಿ
ಸೈರಿಸಲಾರದೆ ॥

ನೆರೆ ನಿನ್ನ ನಂಬಿ ನಚ್ಚಿರ್ದ ಪರಿವಾರಮಂ
ಮರೆದೆಯೋ, ತೊರೆದೆಯೋ, ಮಾರಿದೆಯೋ, ಪೇಳುನೇ-
ಸರ ಕುಲಜ ಎಂದೆಂದು ನುಡಿನುಡಿದು ಮಿಡುಮಿಡುನೆ ಮಿಡು
ಕಿತ್ತು ಪೌರಜನವು ॥೧॥

ದಂತಿಯಿಂದಿಳಿದು ನಡೆದರಿಯದವ ಬರಿಗಾಲೊ
ಳೆಂತಡಿಯನಿಡುವೆ, ಹಾಸಿನೊಳು ಪವಡಿಸುವಾತ
ನೆಂತು ಕಲುನೆಲದೊಳೊರಗುವೆ, ಸಿತಚ್ಛತ್ರ ತಂಪಿನೊಳು
ಬಪ್ಪಾತ ನೀನು ॥

ಎಂತು ಬರಿಬಿಸಿಲನಾನುವೆ, ಪುರದೊಳಿಪ್ಪಾತ
ನೆಂತರಣ್ಯದೊಳಿಪ್ಪೆ, ಜನವನಗಲ್ದರಿಯದವ
ನೆಂತು ಪೇಳೇ ಕಾಕಿಯಾಗಿಪ್ಪೆ, ಎಂದು ಬಾಯ್ಬಿಟ್ಟುದು
ಸಮಸ್ತಜನವು ॥೨॥

ಹೊರಗೆ ದಾನವ ಬೇಡುವವರುಂಟೆ, ಕೊಟ್ಟ ಬೇ
ಸರದ ಮುಗುದರಸು ದೊರಕಿದನಲಾ ಎಂದು ಕ-
ಟ್ಟರೆಗಂಡ ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ ನೀಚ ನೀರಸ
ನಿರ್ಗುಣ ||

ನೆರೆ ಕೊಂದೆ ನಂಬಿ ನಚ್ಚಿರ್ದರೆನ್ನೊಡಲೊಳ
ಳ್ಳುರಿಯುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ
ನಿರಿಯದೇ ಹೇಳು ವಿಶ್ವಾಮೃತ್ಯುವಾದ ವಿಶ್ವಾಮಿತ್ರ
ಎನುತಿರ್ದರು ||೩||

ಜಡೆಗಳೆದು ಮುಕುಟಮಂ, ನಾರಸೀರೆಯನು ತೊರೆ
ದುಡಿಗೆಯಂ. ರುದ್ರಾಕ್ಷಮಾಲೆಯಂ ಕಳೆದು ಮಣಿ
ದೊಡಿಗೆಯಂ, ಕಂದಮೂಲವನೊಲ್ಲದೂಟಮಂ, ದರ್ಭೆಯಂ
ಬಿಟ್ಟಸಿಯನು ||

ಅಡವಿಯಂ ಬಿಟ್ಟು ನಗರಿಯ, ಭೂಷಿತವಂ ಬಿಟ್ಟು
ಕಡು ಸುಗಂಧಂಗಳ, ಜಿತೇಂದ್ರಿಯತ್ವವ ಬಿಟ್ಟು
ಮಡದಿಯರ ಜಗವರಿಯೆ ಕೂಡಲು ವ್ರತಕ್ಕೆ ಮುಪ್ಪಾಯ್ತು
ಮುಪ್ಪಿನೊಳೆಂದರು ||೪||

ಮಲೆತು ಬೆನ್ನಟ್ಟುವ ಮಹಾರಿಷಡುವರ್ಗಮಂ
ಗೆಲಲರಿಯದವನಾವ ಹಗೆಗಳಂ ಗೆಲುವೆ, ನಿ
ನ್ನೊಳಗೆ ಕರುಣವ ಸಂತವಿಡಲರಿಯದವ ನಾವದೇಶವಂ
ಸಂತವಿಡುವೆ ||

ಸಲೆ ತಪಸ್ತೇಜದಿಂ ಪುರುಷಾರ್ಥ ಕೋಶಮಂ
ಬಳಸಲರಿಯದನಾವ ತೇಜದಿಂ ಕೋಶಮಂ ?
ಬಳಸಿದಪೆ, ಕಂಗೆಟ್ಟು ಕಡುಪಾಪಿ ಮೂರ್ಖ ಕೌಶಿಕಕೇಳು
ಕೇಳೆಂದರು ||೫||

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ,
ಪರಿಜನದ ಭಾಗ್ಯವಡವಿಗೆ ನಡೆಯುತಿದೆ, ಸಪ್ತ
ಶರಧಿ ಪರಿವೃತ ಧರೆಯ ಸಿರಿಯು ಸೊಬಗಜ್ಞಾತವಾಸಕ್ಕೆ
ಪೋಗುತಿದೆಕೋ ||

ಎರೆವ ದೀನಾನಾಥರಾನಂದವಡಗುತಿದೆ
ವರ ಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವೆಂದೊಂದಾಗಿ ಬಂದು ಸಂದಿಸಿ ನಿಂದ ಮಂದಿ ನೆರೆ
ಮೊರೆಯಿಟ್ಟುದು ||೬||

ವಸುಧೆ ಬಾಯ್ಬಿಡೆ, ದೆಸೆಗಳಸವಳಿದು ಮರುಗೆ, ನಿ
ಟ್ಟಿಸಲಾರದಂಬರಂ ಕಂಬನಿಯನುಗುಳೆ ಶೋ
ಕಿಸುವ ಪರಿಜನದಳಲನಾಲಿಸುತ ಪಾಲಿಸುತ ಸರದೋರಿ
ಸಂತವಿಡುತ ||

ಹುಸಗಿ ಪುರಮಂ ಮೀರಿ ಹೋಗುತ್ತ ಹಿಂದೆ ಸಂ
ದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ
ನೊಸೆದು ನಿಲಿಸುವ ಭರದೊಳೊಂದೆರಡು ಮಾತವಾಡಿದ
ನದೇವಣ್ಣಿಸುವೆನು ||೭||

ಹಿಂದೆ ರಾಜ್ಯಾಂಗೆಯ್ದ ಗರ್ವದಿಂ ಹೊಲತಿಯರ
ತಂದು ಕುಲವಂ ಕೆಡಿಸಲಾರದಳಲಿಂ ನಿಮ್ಮ
ನೊಂದೊಂದು ವಿಧದಿ ದಟ್ಟಿಸಿ ಜರೆದು ಮಾರುತ್ತರಂಗೊಟ್ಟು
ಕೆಟ್ಟು ನುಡಿದು ||

ನಿಂದೆಗೆಯ್ದನ್ಯಾಯ ಪಾಪಿ ಚಂಡಾಲನೆ
ನ್ನಿಂದಧಮರಾರಯ್ಯ ಸರ್ವಾಪರಾಧಿಯಾಂ
ತಂದೆ ಕರುಣಂಗೆಡದಿರೆಂದು ಮುನಿಯಂ ಬೇಡಿಕೊಂಡನು
ಹರಿಶ್ಚಂದ್ರನು ||೮||

ಮನದೊಳಗೆ ಮರುಗದಿರಿ ಚಿಂತಿಸದಿರಳಲದಿರಿ
ಮುನಿಯದಿರಿ ನೋಯದಿರಿ ಧೃತಿಗೆಡದಿರಿಂಗಳಕ್ರ
ಡನೆಯ ಶಿವನೆನಿಪ ಕೌಶಿಕನೊಡೆಯನಾದನಾತನ ಪಾದ
ಪಂಕಜಕ್ಕೆ ॥

ಎನಗೆ ಬೆಸಕೆಯ್ವಂತೆ ಬೆಸಕೆಯ್ವುದಂಜುವುದು
ವಿನಯಮಂ ನುಡಿವುದೋಲೈಸುತಿಹುದೆಂದು ಪರಿ
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯನಿಧಿ
ಹರಿಶ್ಚಂದ್ರ ನೃಪನು ॥೯॥

ಧರೆಗಧಿಕವೆನಿಪ ರವಿವಂಶದಿಕ್ಷ್ವಾಕು ಭೂ
ವರನು ಮೊದಲನ್ವಯಾಗತವಾಗಿ ಬಂದುದೀ
ಪರಿವಾರವೀ ದೇಶವೀ ನಗರವಿಂದುತನಕಾವೆರಡು ಬಡತನ
ವನು ॥

ನೆರೆವರಿಯಪ್ಪೈಯ್ಯ ನೀವಿನ್ನಿದಂ ರಕ್ಷಿಪುದು
ಹೊರೆವುದಿನಿತಂ ಬೇಡಿ ಪಡೆವೆ ನಾ ನಿಮ್ಮಲ್ಲಿ
ಕರುಣಿಸನೆಗೆಂದು ಕೈಮುಗಿದು ಮುನಿಗಪ್ಪಯಿಸಿ ಕೊಟ್ಟನು
ಹರಿಶ್ಚಂದ್ರನು ॥೧೦॥

ಒಸೆದೀವ ತೆರಕಾರನಾರಾತನಂ ನಿಯಾ
ಮಿಸು ತಂದೆ ಎನೆ, ತನ್ನ ಶಿಷ್ಯಾಳಿಯೊಳು ನೋಡಿ
ಹುಸಿಯುಸೂಯಾ ನೀಚವೃತ್ತಿ ನಿರ್ದಾಕ್ಷಿಣ್ಯ ನಿಷ್ಕರುಣ ನೀತಿ
ಗಳಲಿ ॥

ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾ
ನಿಸನನೆಕ್ಕಟಿ ಕರೆದು ಕೈವಿಡಿದು ಕಿವಿಯೊಡ್ಡಿ
ವಸುಧಾಧಿಪತಿಯು ಬಳಿವಿಡಿದು ಕಳುಹಲು ಬುದ್ಧಿಗಲಿಸಿದ
ನದೇಪೊಗಳ್ವೆನು ॥೧೧॥

ಕೊಡುವೊಡವೆ ಒದಗಿ ಬಾರದೆ ಕಡಲಿ ಕಾನನದ
ನಡುವೆ ತಗಲಿಸಲಿರಿಸಿ ಕೆಲವು ದಿನವುಪವಾಸ
ಬಡಿಸಿದರ್ಗೆ ಕೆಲವು ದಿನ ದೇಹವನುಪಳ್ಳಿಂದು ನೆವವೊಡ್ಡಿ
ಕೆಲವು ದಿವಸ ||

ನಡೆವಾಗ ದಾರಿತಪ್ಪಿಸಿ ತಿರಿಪಿ ಕೆಲವು ದಿನ
ಪಡೆದು ಬೇಯಕ್ಕಾಗೆಯಿಂಕ್ಟಿಂತು ಕೆಲವು ದಿನ
ಕೆಡಿಸಿ ನುಡಿದಪಥಿಯಾದ್ಯಂದು ಧರೆಯರಿಯೆ ನೃಪನಂ
ದುಸಿಕನೆನಿಸೆಂದನು ||೧೨||

ಕರುಣೆಸದಿರನುಗೊಡದಿರಗಲದಿರು, ಅನುಸರಿಸ
ದಿರು, ಬಟ್ಟೆಯೂರಿಡೆಗೆಯ್ಯದಿರು ಕಡೆಗಾನ
ಪರಿಪೋಷಣಾವಾದ ನಿಗ್ರಹ ನಿರೋಧಾಯಾಸವಡಸುವಂದದಿ
ಮಾಳ್ಪುದು ||

ಗುರುಭಕ್ತನಾದಡತಿಬುದ್ಧಿಯುಳ್ಳವನಾದ
ಡರಸನಂ ಪೆಡಸಿ ಹುಸಿ ತೋರೆಂದಡೆನಗವಂ
ಕರಗುವನೆ ದೇವ ಎನೆ ನೇಮಕ್ಕೆ ನೀನಿರಾಂ ಬಂದು ಕಾಡುವೆ
ನೆಂದನು ||೧೩||

ಬಿಸಿಲಾಗಿ ಬಿರುಗಾಳಿಯಾಗಿ ಕಲುನೆಲನಾಗಿ
ವಿಷವಾಗ್ನಿಯಾಗಿ ನಾನಾ ಕ್ರೂರ ಮೃಗವಾಗಿ
ಮುಸಗಿ ಘೋರಾರಣ್ಯವಾಗಿ ಗರ್ಜಿಸಿ ಕವಿವ ಭೂತಬೇತಾಳ
ರಾಗಿ ||

ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ನಿಂ
ದಿಸಿ ಹೋಗಿ ಹೊಕ್ಕಲ್ಲಿ ಹೊಕ್ಕು ಧಾವತಿಗೊಳಿಸಿ
ಹುಸಿಗೆ ಹೊಂಕೊಳಿಸುವೆಂ ಭೂಭುಜನನೆನ್ನಿಂದ ಬಲ್ಲಿದರ ·
ದಾರೆಂದನು ||೧೪||

ಬೇರೊಬ್ಬನಲ್ಲೀತನೀ ಬಂದನಾಯಾಸ
ಕಾರನತಿಗರುವನತಿಸುಖಿಯೀತನೆಂದುದಂ
ಮೀರದಿರು ಧನವಕೊಡು ನಡೆಯರಸ ಹೋಗೆಸಲು ಮುನಿ
ವರನ ಚಾರಣಕೆಂಗಿ ||

ಸೇರೆ ಸತಿ ಸುತ ಮಂತ್ರಿವೆರಸಿ ರಿಪುಬಲಸೂಱೆ
ಕಾರನೊಲವಿಂ ತಿರುಗಿ ನಡೆವಾಗ ಮುಂದಿ ಬಾ
ಯಾರುತ್ತ ಚೀರುತ್ತ ಗೋಳಿಡುತ್ತಳುತಿದ್ದ ನಡೆಸುವೇ
ವಣ್ಣಿ ಸುವೆನು ||೧೫||

ಜನನಿ ಹಿಂಗಿದ ಶಿಶು ಗೆ, ಸಸಿ ಬಿಟ್ಟ ಕುಮುದಕ್ಕೆ,
ದಿನನಾಥನುಳಿದ ಕಮಲಕ್ಕೆ, ನೆರೆ ಸಿರಿ ಸನೆುದ
ಮನೆಗೆ, ಜೀವಂ ತೊಲಗಿದೊಡಲಿಂಗೆ, ತೈಲವಿಂಗಿದ
ದೀಪ್ತಿಗುದಕವರತ ||

ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆ
ಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ
ಜನಪತಿ ಹರಿಶ್ಚಂದ್ರನೆಲ್ಲವಂ ಮುನಿಗಿತ್ತರಣ್ಯಕ್ಕೆ ನಡೆವಾ
ಗಲು ||೧೬||

— ರಾಘವಾಂಕ.

# ಪರಿಚಯ

ಅಯೋಧ್ಯೆಯ ರಾಜನಾದ ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ರಾಜ್ಯ ವೊಪ್ಪಿಸಿ, ಅಯೋಧ್ಯೆಯನ್ನು ಬಿಟ್ಟುಹೋಗುವಾಗಿನ ದೃಶ್ಯವಿದು. ಇದನ್ನು "ಹರಿಶ್ಚಂದ್ರಕಾವ್ಯ'' ದಿಂದ ಆಯ್ದುಕೊಂಡಿದೆ.

ಈ ಗ್ರಂಥವನ್ನು ಬರೆದ ಕವಿ ರಾಘವಾಂಕನು. ಸಿದ್ಧರಾಮ ಪುರಾಣ, ಸೋಮನಾಥಚರಿತೆ, ವಿಶ್ವೇಶ್ವರಚರಿತೆ, ಶರಭಚಾರಿತ್ರೆ, ಹರಿಹರ ಮಹತ್ವ ಇವು ಈತನ ಇತರ ಗ್ರಂಥಗಳು. ಅವನ ಕೃತಿಗಳಲ್ಲಿ ಹರಿಶ್ಚಂದ್ರ ಕಾವ್ಯವೆ ಕಾವ್ಯದೃಷ್ಟಿಯಿಂದ ಉತ್ತಮ ಕೃತಿಯಾಗಿದೆ. ಈ ಕಾವ್ಯವು ಕನ್ನಡ ಸಾಹಿತ್ಯದಲ್ಲಿ ಮೊದಲನೆಯ ಷಟ್ಪದಿಕಾವ್ಯಮಾತ್ರವಲ್ಲದೆ ಷಟ್ಪದಿಯ ರೂಪದಲ್ಲಿ ದೃಶ್ಯಕಾವ್ಯ. ಇವೆರಡನ್ನು ಬೆರಸಿದ ಮೇಲ್ತರಗತಿಯ ಕಥನಶಕ್ತಿ, ರಸವತ್ತಾದ ಕಥನಕ್ರಮ, ಸ್ಫುಟವಾದ ಪಾತ್ರಪ್ರದರ್ಶನ, ನೈಜವಾದ ಸಂಭಾಷಣೆಗಳು ಇಲ್ಲಿ ಇವೆ.

ರಾಘವಾಂಕನದು ಹಳಗನ್ನಡ ಹೊಸಗನ್ನಡಗಳ ಸಂಧಿಕಾಲದ ಸಮ್ಮಿಶ್ರಶೈಲಿ. ಅವನು ಪಂಡಿತನಾದರೂ ಜನಭಾಷೆಯ ಕೆಚ್ಚಿನಿಂದ ತನ್ನ ವಾಣಿಯನ್ನು ತುಂಬಿದ್ದಾನೆ. ನಾಟ್ಯಪ್ರತಿಭೆಯುಳ್ಳ ಪಂಪ, ರನ್ನ, ಕುಮಾರವ್ಯಾಸರ ಜೊತೆಗೆ ನಿಲ್ಲಲು ಇವನಿಗೂ ಸ್ಥಾನವಿದೆ.

ಈತನ ಕಾಲದ ವಿಷಯಕ್ಕೆ ಸ್ವಲ್ಪ ಭಿನ್ನಾಭಿಪ್ರಾಯವಿದೆ. ೧೨ನೆಯ ಶತಮಾನದ ಉತ್ತರಾರ್ಧವೆಂದು ಶ್ರೀ. ಆರ್. ನರಸಿಂಹಾಚಾರ್ಯರೂ, ೧೩ನೆಯ ಶತಮಾನದ ಕೊನೆಯೆಂದು ರೆ. ಕೆಟಲ್ ಮೊದಲಾದವರೂ ಅಭಿಪ್ರಾಯಪಡುತ್ತಾರೆ.

### ೫. ಶಬ್ದಗಳು.

೧೭. ಪರಿವೃತ = ಸುತ್ತುಗಟ್ಟಿದ;
೧೮. ಅಸವಳಿ = ದಿಕ್ಕೆಡು;
೨೧. ಎಡರು = ಕಷ್ಟ;
೨೩. ತಗಹು = ಬಂಧನ;
೨೪. ನಿಗ್ರಹ = ಪೀಡೆ;
= ಸುಂದರಿ.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಪುರಜನವು ಮಿಡುಕಲು ಕಾರಣವೇನು? (೨) ವಿಶ್ವಾಮಿತ್ರನು ತೆಟಕಾರನಿಗೆ ಏನು ಹೇಳಿಕಳಿಸಿದನು? (೩) "ವಿಶ್ವಾಮಿತ್ರ ವಿಶ್ವಾಮೃತ್ಯುವಾದೆ" ಪುರುಜನರ ಈ ಮಾತು ಸರಿಯೇ? (೪) ಪುರಜನರು ವಿಶ್ವಾಮಿತ್ರನನ್ನು ಮತ್ತೆ ಹೇಗೆ ತೆಗಳಿದರು? (೫) ಹರಿಶ್ಚಂದ್ರನು ಹೊರಡುವದನ್ನು ಕವಿಯು ಹೇಗೆ ಹೇಳಿದ್ದಾನೆ?

ಸ್ಪಷ್ಟೀಕರಿಸಿರಿ:—

(೧) ವ್ರತಕ್ಕೆ ಮುಪ್ಪಾಯ್ತು ಮುಸ್ಸಿನೊಳು.

(೨) ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ.

**(ಅ) ತತ್ಸಮ ತದ್ಭವ ಹೇಳಿರಿ.**

ಪಸಿ, ಯಾಗ, ವ್ರತ, ಮುಗುದ, ಬೀಯ, ರಕ್ಷೆ.

**(ಬ) ಕೆಳಗಿನ ಶಬ್ದಗಳಲ್ಲಿಯ ಅರ್ಥವ್ಯತ್ಯಾಸವನ್ನು ಹೇಳಿರಿ.**

ಅಱಿ, ಅರಿ; ಅಱಿಸು, ಅರಿಸು, ? ಕಮಲ, ಕುಮುದ; ಮಱುಗು, ಚಿಂತಿಸು.

**(ಕ) ರೂಪಸಿದ್ಧಿ ಹೇಳಿರಿ.**

ತೆಟಕಾರ, ಸೂಟಿಕಾರ, ಹುಸಿಕ, ಬಪ್ಪ

ಅನುಪ್ರಾಸವೆಂದರೇನು? ಅದರ ಉದಾಹರಣೆಗಳನ್ನು ನೀವು ಓದಿದ ಭಾಗದಿಂದ ಆಯ್ದು ತೋರಿಸಿರಿ.

# ೩. ಮಯೂರಧ್ವಜನ ಸತ್ವಪರೀಕ್ಷೆ.

ಜನನಾಥ ಕೇಳ್ಮಯೂರಧ್ವಜ ಮಹೀಶ್ವರಂ ।
ದಿನನಾಥನುದಯದೊಳ್ವಿಮಲ ಸಂಧ್ಯಾವಿಧಿಯ ।
ನನುಕರಿಸಿ ಕೃಷ್ಣನಿದ್ದೆಡೆಗೆ ತಾಂ ಪೋಗಿ ಕಂಡಪೆನೆಂಬ
ಕಾರಿಯವನು ॥

ಮನದೊಳಗೆ ನಿಶ್ಚೈಸಿ ಪ್ರೊದಮುದವನಾಗಿ ನಿಜ ।
ತನುಜನಂ ಕರಿಸಿ ಮಂತ್ರಿಗಳೆಲ್ಲರಂ ಬರಿಸಿ ।
ವಿನುತ ಭೂಸುರ ನೃಪಾಲಸ್ತೋಮದೊಡಗೂಡಿ ಕುಳ್ಳಿರ್ದ
ನೋಲಗದೊಳು ॥೧॥

ಅನ್ನೆಗಂ ವೃದ್ಧ ವಿಪ್ರಾಕಾರಮಂ ತಳೆದು ।
ಪನ್ನಗಾರಿಧ್ವಜಂ ನಿಜ ಶಿಷ್ಯ ಪಾರ್ಥನಂ ।
ತನ್ನೊಡನೆ ಕೂಡಿಕೊಂಡೊಯ್ಯನೊಯ್ಯನೆ ಹಯದ್ವಯದಿಂದೆ
ಪತ್ನಿಸಹಿತ ॥

ರನ್ನದೊಡವುಗಳ ಕತ್ತುರಿಯ ತಿಲಕದ ನೊಸಲ ।
ಮನ್ನೆಯರ ಗಡಣದಿಂ ದ್ವಿಜ ನಿಕರದಿಂದ ಸಂ ।
ಪನ್ನ ದೀಕ್ಷೆಯೊಳೆಸೆವ ಭೂಪನೆಡೆಗೆಯ್ದಿ ಕೇಳ್ ಸ್ವಸ್ತ್ಯಸ್ತು
ನಿನಗೆಂದನು ॥೨॥

ಮತ್ತೆ ಶ್ರೀ ಮಹೀಪಾಲ ಶಾರ್ದೂಲ ನಿನಗಾಗ ।
ಉತ್ತರೋತ್ತರಮೆಂದು ತನಗೆ ಸೀಂ ಬೇಡಿದುವ ।
ನಿತ್ತಪೆ ಮಹಾದಾನಿಯೆಂದು ಶಿಷ್ಯಂವೆರಸಿ ಬಂದೆನಾನೀಗ
ನಿನ್ನ॥

ಉತ್ತಮಾಧ್ವರಶಾಲಿಗೆಂಬ ದ್ವಿಜನಂ ಕಂಡು ।
ಚಿತ್ತದೊಳ್ಬೆದರಿ ನೃಪನಿದಿರೆದ್ದು ಪದಕೆರಗಿ ।
ದತ್ತಾರ್ಘ್ಯ-ಪಾದ್ಯಾಸನಂಗಳಿಂದುಪಚರಿಸಿ ಕುಳ್ಳಿರಿಸು
ತಿಂತೆಂದನು ॥೩॥

ಎಂದು ಪರಿಯಂತಂ ದ್ವಿಜರ್ಗವಜ್ಞೆಯನೆಸಗ ।
ರಂದು ಪರಿಯಂತ ಮೃಸಲೆ ನರರಬಾಳ್ಕೆನಿಂ ।
ಬಂದು ಪರಸಿದೊಡಾದುದಿಂದುತ್ತರೋತ್ತರಂ ತನಗೆ ನಿಶ್ಚಯ
ಮಿಳೆಯೊಳು ॥

ಸಂಧಿಸಿದ ಜನದ ವಂದನೆಗೆ ಮೊದಲೇಸ್ವಸ್ತಿ ।
ಯೆಂದೊಡಾ ಭೂಸುರಂ ಪ್ರಿಯದೊಳಾ ಪ್ರಾಣಿಯಂ ।
ಕೊಂದನಲ್ಲದೆ ಬೇರೆ ಶಾಪಮೇತಕೆ ವಿಪ್ರ ಪೇಳೆಂದೊಡಿಂ
ತೆಂದನು ॥೪॥

ಪರಸಲಾಗದು ನಮಸ್ಕಾರಕ್ಕೆ ಮುನ್ನೆ ಭೂ ।
ಸುರರನ್ಯರಂ ತನ್ನ ಸಂಕಟ ನಿಮಿತ್ತದಿಂ ।
ದರಸಂಗೆ ಬಿನ್ನಪಂಗೈವನಾಶೀರ್ವಾದಮಂ ಮೊದಲೆ
ಮಾಡದಿಹನೆ ॥

ಧರಣಿಪತಿ ವಂದ್ಯನಲ್ಲವೆ ದೋಷಮೇನಿದಕೆ ।
ಪಿರಿದಾರ್ತನಾಗಿ ನಿನ್ನೆಡೆಗೆ ನಾಂ ಬಂದೆನ ।
ಧ್ವರ ಶಾಲೆಗೆಂದು ಕಪಟದ್ವಿಜಂ ನುಡಿಯಲ್ಕೆ ನರನಾಥ
ನಿಂತೆಂದನು ॥೫॥

ದ್ವಿಜತಿಲಕ ನೀನನುಗ್ರಹಿಸೆನಗೆ ಧನ್ಯ ನಾಂ ।
ನಿಜಶಿಷ್ಯನಂ ಕೂಡಿಕೊಂಡು ಮಖ ಮಂಟಪಕೆ ।
ಬಿಜಯಂಮಾಡಿದ ಕಜ್ಜಮಾವುದೇತರೊಳಾಸೆ ನಿನಗಾರ್ತ
ಮೇನಿದರೊಳು ॥

ತ್ಯಜಿಸಬೇಡೊಂದುಮಂ ಪೇಳ್ದೊಡಾನೀವೆನಾ ।
ರಜವಿಲ್ಲದೆಲ್ಲಮಂ ವಾಚಿಸೆಂದಾ ಶಿಖಿ ।
ಧ್ವಜನಾಡಲಾ ವಿಪ್ರನಿಂತೆಂದು ತನ್ನ ವೃತ್ತಾಂತಮಂ
ವಿವರಿಸಿದನು. ॥೬॥

ಉರ್ವೀಂದ್ರ ಕೇಳಾದೊಡಾಂ ಧರ್ಮಪುರದೊಳ್ಪಿ ।
ರ್ಪವಿಡೆದಿಹೆಂ ಕೃಷ್ಣಶರ್ಮನೆಂದೆನಗೆ ಸುತ ।
ನೊರ್ವನುಂಟಾತನ ವಿವಾಹಕ್ಕೆ ತವ ಪುರೋಹಿತ
ಸತ್ಯಶೀಲನಲ್ಲಿ ॥

ಒರ್ವಕನ್ನಿಕೆ ಮದುವೆಗಿಹಳೆಂದೊಡಲ್ಲಿಗ ।
ಕ್ಕುರ್ವೆರಸಿ ಮಗನನೊಡಗೊಂಡು ಬರುತಿರ್ದೆಂ ಪೊ ।
ದರ್ವಡೆದಡವಿಯ ಪಥದೊಳ್ಪಿಡಿದುದೊಂದು ಕೇಸರಿ ತನ್ನ
ನಂದನನನು ॥೭॥

ಆಸಿಂಗಮತಿಭರದೊಳಿರಗಲಾ ಭೀತಿಗೆ ನೃ- ।
ಕೇಸರಿ ಸ್ಮರಣೆಯಂ ಬಿಡದೆ ನಾನಕಟ ಹಾ ।
ಹಾ ಸೂನು ಹಾಯೆಂದು ಹಂಬಲಿಸಲದು ತನ್ನ ಘೋರ ನಖ
ದಂಷ್ಟ್ರದಿಂದೆ ॥

ಗಾಸಿ ಮಾಡದೆ ಪುತ್ರನಂ ಪಿಡಿದುಕೊಂಡಟ್ಟ ।
ಹಾಸದಿಂ ಮಾನವರ ತೆರದಿಂದೆ ನುಡಿದುದೆಲೆ ।
ಭೂಸುರೋತ್ತಮ ತನ್ನ ಮಾತನಾಲಿಸು ಬರಿದೆ ಹಲುಬಲೇ
ನಪ್ಪುದೆಂದು ॥೮॥

ಮಕ್ಕಳಿಲ್ಲದವರ್ಗೆ ಲೋಕಮಿಲ್ಲೆಂಬುದೇ ।
ಸಕ್ಕಜವೆ ನಿಖಿಳ ನಿಗಮಾರ್ಥಮಿದು ತನಗೀಗ ।
ಸಿಕ್ಕಿದನಲಾ ನಿನ್ನ ತನು ಸಂಭವಂ ಬಿಡಿಸಿಕೊಳ್ಳಲಾರ್ಪನಾರು
ಬರಿದೆ ॥

ಕಕ್ಕುಲಿತೆ ಬೇಡ ನಡೆ ಶಿಷ್ಯನಂ ಕರೆಕೊಂಡು ।
ಮಿಕ್ಕಸುತರುಳ್ಳೊಡಾರೈವುದೆನೆ ಮಗನ ಮೇ ।
ಲಕ್ಕರಾಸರಿಸಿ ಕಡುಶೋಕದಿಂದುಗ್ರಕೇಸರಿಗೆ ತಾ
ನಿಂತೆಂದನು ॥೯॥

ಅತಿಸೃಷ್ಟಸೃಷ್ಟಿದಿನಪರ್ವವಂ ಪುತ್ರ ಪ ।
ಜನಿತನಿನ್ನು ತಾನಿರ್ದು ಮಾಳ್ಪುದೇನೆನ್ನನಾ ।
ಹುತಿಗೊಂಡು ತನಗೆ ಗತಿಗುಡುವಸುತನಂ ಬಿಡುವುನೆಂದು
ನಾಂ ಬೇಡಿಕೊಳ್ಳಲು ॥

ಸ್ಮೃತಿಯು ಬಯಸುವ ಮುಖಿಗಾವ ಕಂಟಕವಿಲ್ಲ ।
ಹತನಹುದು ಸುಖದಿಂದೆ ಬಾಷ್ಪಂಗೆ ಕಾಲ ಕ ।
ಲ್ಪಿತದಿಂದ ಮೊರಕಿದನಿವಂ ನಿನ್ನನೊಲ್ಲೆನಾಂ ಪೋಗೆಂದು
ಹರಿ ನುಡಿದುದು ॥೧೦॥

ಆ ನುಡಿಗೆ ನಡುಗಿ ತನಯನ ಮೇಲಣಾಸೆಯಿಂ ।
ದಾನೆಂದೆನಾ ಸಿಂಹಕೆಲೆ ಮೃಗಾಧಿಪ ತನ್ನ ।
ಸೂನುವಂ ಕಾವರಿಲ್ಲವೆ ಧರೆಯೊಳುಗ್ರತಪದಾನ ಧರ್ಮಂ
ಗಳಿಂದೆ ॥

ಏನುಪಾಯಂ ಗೆಯ್ವೆನೆಂದು ಮರುಗಲ್ಕೆ ಪಂ ।
ಚಾನನಂ ಬಳಿಕ ತನಗೊಂದಾಸೆಯಂ ಕೊಟ್ಟು ।
ಭೂನಾಥ ನಿನ್ನೆಡೆಗೆ ಕಳುಹಿದೊಡೆ ಬಂದೆನೆನಲವನೀಶ
ನಿಂತೆಂದನು ॥೧೧॥

ವಿಪ್ರೇಂದ್ರ ಕೇಳೆನ್ನ ರಾಷ್ಟ್ರಮೊಳ್ಪರಸಿಂ ।
ದ ಪ್ರವರ್ತನಮುಲ್ಲವಲ್ಲಿಯುಂ ಕ್ಷುದ್ರಸಿಂ ।
ಹ ಪ್ರಸಂಗವನರಿಯೆನಿನ್ನೆಗಂ ನಿನ್ನ ಸುತನಂ ಪಿಡಿದ
ಸಿಂಹಮುಂಟೆ ॥

ಅಪ್ರಸಿದ್ಧ ಪ್ರೋಕ್ತಮಿದು ಸಿಂಹಕೆನ್ನಿಂದ ।
ದ ಪ್ರಯೋಜನಮಾದೇಂ ಮಹಾಜದಂಜದೆ ತನಗೆ ।
ಕ್ಷಿಪ್ರದಿಂ ಪೇಳೆಂದು ಭೂಪರಂ ಬೆಸಗೊಂಡಾ ಪಾರ್ವ
ನಿಂತೆಂದನು ॥೧೨॥

ಎನ್ನೊಳಾ ಸಿಂಹಮಾತಿನ ನುಡಿಯನೀಗಳಾಂ ।
ನಿನ್ನೊಳೆಂಬಮು ನೀತಿಯೂಪಸುದೆ ಸುತಬಿನ ।
ವಿನ್ನೇನು ದಾರುಣಪ್ರೋ ಪೇಳಬೇಕಾಗಿಹುದು ನೃಪ ಕೇಳದರ
ಮಾತನು ॥

ಮುನ್ನೆ ಮುದಿಗೂಡು ತಪದಿಂದೊಣಗಿತಿದನೊಲ್ಲೆ ।
ನುನ್ನಿನದಿರಾಪೂರ್ಣಡೀವ್ರುದು ದಿವ್ಯಮುಗ್ಧ ಸಂ
ಪನ್ನ ಫಲಪುಷ್ಟಮಾಗಿಹ ಮಯೂರಧ್ವಜನ ನ್ಯಾಯೊಳ
ರ್ಧವನೆಂದುದು ॥೧೩॥

ಈ ಮಗನ ಮೇಲೆ ನಿನಗಾಸೆಯುಳ್ಳೊಡೆ ಬಡುವೆ
ನಾ ಮಯೂರಧ್ವಜನ ದೇಹಾರ್ಧಮಂ ಕೊಂಡು
ಬಾ ಮಹೀಪಾಲನಲ್ಲಿಗೆ ಪೋಗು ಕೊಲ್ಲೆ ನಾನನ್ನೆಗಂ
ನಡೆಯೆನಲ್ಕೆ

ಭೂಮೀಶನಿತ್ತಪನೆ ತನ್ನ ತನು ಭಾಗಮಂ
ಭ್ರಾಮಕಮಿದೆಂದು ಜರೆದಾಂ ತಿರಸ್ಕರಿಸೆ ಮ ॥
ತ್ತೀ ಮಾತನಾಡಿದುದು ತನ್ನೊಳಾಕೇಸರಿ ನರೇಂದ್ರ ಕೇಳ್ಕೌ
ತುಕವನು ॥೧೪॥

ಎಲೆ ಮರುಳೆ ವಿಪ್ರ ಪರಪುರುಷಾರ್ಥಕೆಳಸುವಂ |
ನೆಲದ ಮೇಲಣ ಬಾಳ್ಕೆಯಂ ನಿಜ ಶರೀರವಂ |
ನೆಲೆಯೆಂದು ನೋಡುವನೆ ಕವಚಮಂ ಕರ್ಣಂ ದಧೀಚಿ
ತನ್ನಸ್ಥಿಗಳನು ||

ಒಲಿದಿತ್ತು ಕೀರ್ತಿಯಂ ತಳೆದುದಿಲ್ಲವೆ ನಿನ್ನ |
ಕುಲಮುಳಿಯಬೇಕೆಂದು ಪೋಗಿ ನೀಂ ಬೇಡಿದೊಡೆ |
ಸಲೆ ಕರುಣದಿಂದಾನೃಪಂ ಕಾಯಮಂ ಕೊಯ್ದು ಕುಡದಿರಂ
ಪೋಗೆಂದುದು ||೧೫||

ಸುತ್ಯಾಗಿ ಶುಚಿ ಶೂರನುಪಕಾರಿ ಕಮಲಾಕ್ಷ |
ಭೃತ್ಯನನಸೂಯಂ ಕೃಪಾವನಧಿ ಭುವನ ಜನ |
ಸ್ತುತ್ಯಂ ಮಯೂರಧ್ವಜಂ ತನ್ನ ಜೀವನವನಾರ್ದೊಡಂ
ಬೇಡಿರ್ದಗೆ ||

ಅತ್ಯಂತ ಹರ್ಷದಿಂದಿತ್ತು ಸತ್ಕೀರ್ತಿಯನ |
ನಿತ್ಯ ಸಂಸಾರದೊಳ್ಪಡೆದಲ್ಲದಿರ್ಪನೆ |
ಸತ್ಯವಿದು ಪೋಗೆಂದು ಸಿಂಹಮೊನ್ನಂ ಕಳುಹಿದೊಡೆ ನಿನ್ನೆಡೆಗೆ
ಬಂದೆನು ||೧೬||

ರಾಯನಾಂ ಮೂಢನಲ್ಲವೆ ಸಕಲ ವೈಭವ |
ಶ್ರೀಯುಕ್ತವಾಗಿರ್ದ ನಿನ್ನ ಘನಸೌಂದರ್ಯ |
ಕಾಯಮಂ ಕೊಟ್ಟು ತನ್ನಾತ್ಮಜ ಬದುಕಬೇಕೆಂದು
ಸಿಂಹದಮಾತಿಗೆ ||

ವಾಯದಿಂ ಬಂದೆನಿಲ್ಲಿಗೆ ಸಾಕದಂತಿರಲ |
ಪಾಯಕೊಳಗಾಗಿರ್ದ ತನ್ನಸುತನುಳಿವುದಕು |
ಪಾಯಮಂ ಕಾಣೆನೆಂದಾ ಕಪಟ ಭೂಸುರಂ ಸುಯ್ದು
ಮತ್ತಂತೆಂದನು ||೧೭||

ಭೂಸುರಂ ಬ್ರಹ್ಮಚರ್ಯೆಯೊಳಿರ್ದ ಪುತ್ರಂಗೆ |
ತಾ ಸುವಾದೊಡೆ ರಾಮಚಂದ್ರಂಗೆ ಮೊರೆಯಿಟ್ಟೊ |
ಡಾಸುತನ ಜೀವಮಂ ಬರಿಸನೇ ಪೌರುಷದೊಳಾ
ರಾಘವೇಶ್ವರಂಗೆ ||

ಆ ಸಟೆಯಲಾ ನೀನುಮುದರಿಸೆನ್ನಾತ್ಮಜಂ |
ಕೇಸರಿಯ ಬಾಯತುತ್ತಾದನೀ ದುಃಖದಿಂದಾ |
ಯಾಸಮಂ ನಿನಗೊರೆದೆನಿನ್ನುಳುಹು ಮಾಣೆಂದು ಕಪಟ-
ದ್ವಿಜಂ ನುಡಿದನು ||೧೭||

ಕೇಳ್ದನವನೀಶ್ವರಂ ಪ್ರಚ್ಛನ್ನಭೂಸುರಂ |
ಪೇಳ್ದ ವೃತ್ತಾಂತಮಂ ಕೀರ್ತಿಸಿಲ್ವುದು ನರರ |
ಬಾಳ್ದಿಟವಿದಲ್ಲೆಂದು ನಿಶ್ಚೈಸಿ ವಿಪ್ರನಂ ಕರೆದು ನಿನಗೀ
ತನುವನು ||

ನೀಳ್ದು ಕೊಟ್ಟಪೆನೆಂದಭಯಮಿತ್ತು ಬಳಿಕ ತಾ |
ನಾಳ್ದಳಿಯನಾತ್ಮಜಂಗಪ್ಪೈಸಿ ಹರ್ಷಮಂ |
ತಾಳ್ದನಿಬರೆಲ್ಲರಂ ಮಂಟಪದೊಳಿಹುದೆಂದು ಕುಳ್ಳಿರಿಸಿ
ಮೊರವಿಟ್ಟನು ||೧೯||

ತರಿಸಿ ಗಂಗಾತೋಯಮಂ ಮಜ್ಜನಂಗೈದು |
ಪರಮ ಸಾಲಗ್ರಾಮತೀರ್ಥಮಂ ಕೈಕೊಂಡು |
ತರುಣ ತುಲಸೀದಳದ ಮಾಲೆಯಂ ಕಂಧರದೊಳಾಂತು
ಮಂಟಪಕೆ ಬಂದು ||

ನೆರೆದ ಭೂಸುರ ಸಭೆಗೆ ಸಾಷ್ಟಾಂಗದಿಂದೆರಗಿ |
ಕರಯುಗಳಮಂ ಮುಗಿದು ನಿಂದು ಬಿನ್ನೈಸಿದಂ |
ಧರಣೀಶ್ವರಾಗ್ರಣಿ ಮಯೂರಧ್ವಜಂ ಜನಾಧೀಶ
ಕೇಳ್ಕೌತುಕವನು ||೨೦||

ಈ ಮಹಾಸ್ಥಾನದೊಳ್ನೆರೆದಖಿಳ ಭೂಸುರ
ಸ್ತೋಮಮಂ ನಿರೀಕ್ಷಿಸುವುದೆಂದು ಬಲಿಯಧ್ವರಕೆ
ವಾಮನಂ ಬಂದಂತೆ ತನ್ನ ಮಖಕೀದ್ವಿಜಂ ತಾನೇ ಬಿಜಯಂ
ಗೈದನು ||

ಶ್ರೀಮಾಧವ ಸ್ವರೂಪದೊಳೀಗಳರಿದು ತ
ನ್ನಿಮ್ಮೈಯೊಳರ್ಘಮಂ ಕೊಯ್ದು ಕೊಟ್ಟಪೆನತಿ
ಪ್ರೇಮದಿಂದೀತಂಗೆ ಬದುಕಲೀತನ ಮತಂ ಪೊಸತಾಗ
ಲಿಳೆಗೆಂದನು ||೨೧||

ಭೂನಾಥನೆಂದ ಮಾತಂ ಕೇಳ್ದು ಸಕಲ ಪ್ರ
ಧಾನಿಗಳುಮರಸನ ಪುರೋಹಿತರುಮಾದ್ವಿಜರು
ಮೋನಿಸಿದೆತ್ತಣ ಕೃತ್ಯಮೀ ವಿಪ್ರನಂತಕೋಪಮನೆಂದು
ಭೀತಿಯಿಂದೆ ||

ದಾನಮೆಂದೊಡೆ ರಾಜ್ಯ ಲಕ್ಷ್ಮಿ ಧನ ಕನಕ ಮಣಿ
ಧೇನುಗಳನೀವರೀ ಕಾಯಮುಮಂ ಕೊಯ್ದು ಕುಡು
ವೀ ನಿಮಿತ್ತವನರಿಯೆವೆಂದೆಲ್ಲರುಂ ಕಂಪಿಸಲ್ಕ ನೃಪತಿ
ಯಿಂತೆಂದನು ||೨೨||

ಯಾಚಿಸಿದನಂಗಮಂ ಸುತನನುಳುಹೆಂದೆನಗೆ
ಸೂಚಿಸಿದನೀದ್ವಿಜಂ ತಾಂ ಕೊಡುವೆನೆಂದೊಡನೆ
ವಾಚಿಸಿದೆನಿಂತಿದಕೆ ತಪ್ಪಿದೊಡೆ ಲೋಕಸೊತ್ತನ್ನಂ ಸಮಸ್ತ
ಜನರು ||

ನಾಚಿಸಿದೆ ಮಾಣ್ದಪರೆ ಪುಸಿದೊಡಂತಕನವ
ರ್ಪ್ಪಾಚಿಸರೆ ನರಕದೊಳ್ತ್ರಿಯನರಿದೀಯ ಲಾ
ಲೋಚಿಸಲಿದೇಕಿನ್ನು ತೊಲಗಿ ನೀವೆಂದು ನೃಪನನಿಬರಂ
ಸೈತಿಟ್ಟನು ||೨೩||

ಆ ಮಯೂರಧ್ವಜ ಬಳಿಕೆಲ್ಲ ವಿಪ್ರರಂ
ಹೇಮ ಮಣಿ ಗಜ ತುರಗ ವಸ್ತ್ರ ಭೂಷಣ ಧೇನು
ಭೂಮಿ ದಾನಂಗಳಿಂ ತಣಿಸಿ ನಟಿಸಿದನೆರಡು ಕಂಬಮಂ
ನಡುವೆ ತನ್ನ ||

ಕೋಮಲ ಶರೀರಮಂ ಪುಗಿಸಿ ಕಾಂಚನಮಯ ಸು-
ದಾಮದಿಂ ತೋಳ್ತೊಡೆಗಳಂ ಬಿಗಿಸಿಕೊಂಡು ನಿಂ
ದಾ ಮಹೀಸುರನ ಪದಕಮಲಂಗಳಂ ತೊಳೆದು ಸಾದರ
ದೊಳಿಂತೆಂದನು ||೨೪||

ಭೂಸುರೋತ್ತಮ ನಿನಗೆ ತಾಂ ಕುಡುವ ದೇಹಾರ್ಧ
ದೀ ಮಹಾದಾನದೊಳಖಿಲ ಯಜ್ಞನಾಯಕನಾದ
ವಾಸುದೇವಂ ಪ್ರೀತನಾಗಲಿ ಸ್ವತ್ರಸ್ಥಲೊದ್ಭವರಾದ
ಜೀವಿಗಳೊಳು ||

ಲೇಸಿಂದೆ ಪಾರ್ಥಂಗೆ ತನು ಧನವನೀವೆಡೆಯೊ
ಳೋಸರಿಸದಿರಲಿ ಬುದ್ಧಿಗಳೆಂದು ಸ್ವಪತಿಕ
ಟ್ಟಾಸುರದ ಕೊಯ್ಗಾರರಂ ಕರೆಸಿ ತೆಗೆಸಿದಂ ಮಸೆದ
ಕೊಯ್ಗತ್ತಿಗಳನು ||೨೫||

ಕುಡವನಿರೆ ತನಗೆ ಬೇಕಾದುದಂ ಬೇಡುವಂ
ಬಿಡುವನೇ ಬೇಡುವಂ ಬರೆ ತನ್ನೊಳ್ಕೈದುರ್ಪವಂ I
ತಡೆವವನೆ ಕುಡುವವಂ ಕುಡುವ ಬೇಡುವರೊಳಗೆ ಕುಡನೆಂಬ
ತೆರದೊಳು ||

ಎಡೆತಡೆಗಳಿಲ್ಲೆಂಬ ನಾಣ್ಣುಡಿಯ ನೀ ಪಾರ್ಥ-
ನೊಡನೀಶರೊಳ್ಕಂಡೆವೆಂದು ನಡನಡುಗಿ ಮೊರೆ
ಯಿಡುತಿರ್ದರವನ ರಾಷ್ಟ್ರದ ಜನಂ ಬೆದರಿ ಕುರರೀಗಣಂಗಳ
ತೆರದೊಳು ||೨೬||

ಪ್ರಜೆಗಳಿರ ನೀವಿದಕೆ ದುಃಖಿಸದಿ ಧನ್ಯನಾಂ ।
ನಿಜ ಶರೀರದೊಳರ್ಧಮಂ ಕೊಯ್ದು ಕುಡುವೆನಿ ।
ದ್ವಿಜನ ಹಸ್ತದೊಳಿವಂ ಸ್ಪೃಹರಿಯೆಂದೀತನಡವಿಯ ಸಿಂಹ
ಕೀಯಲೀದನು ॥

ಗಜಬಜವಿದೇತಕೆ ಪರೋಪಕೃತಿಗಲ್ಲದ ಮ
ನುಜನ ಬಾಳ್ಬಣಬುರಿದ ಬೂದಿಯಂತಪ್ಪುದಾ ।
ರಜವಿಲ್ಲದೀಕ್ಷಿಸುದು ಕೌತುಕವನೆಂದೊಡಂಬಡಿಸಿದಂ
ನರನಾಥನು॥೨೬॥

ಪುತ್ರ ಮನುಜೇಂದ್ರನಾವಿಪ್ರನಂ ಕರೆದು ನಿನ ।
ಗಿತ್ತೆಸಿದೇಹಾರ್ಧಮಂ ಪರಿಗ್ರಹಿಸೆಂದು ।
ಚಿತ್ತದೊಳ್ಮಿಗೆ ಹರ್ಷಮಂ ತಾಳ್ದು ಪೊರೆಯೊಳಿಹ ಸೂದ-
ಕರ್ಮಜ್ಞರೊಡನೆ ॥

ಪೊತ್ತು ಕಳೆಯದೆ ತನ್ನ ತನುವನೆರಡಾಗಿ ಮಸೆ ।
ವೆತ್ತ ಕರಪಪತ್ರದಿಂ ಸೀಳ್ವುದೆಂದಾಜ್ಞಾಪಿ
ಪುತ್ತಿರೆ ಶಿಖಿಧ್ವಜನ ಕುಮುದ್ವತಿ ನುಡಿದಳತಿವಿನಯ
ದಿಂದೆ ಪತಿಗೆ ॥೨೮॥

ನೀಂ ತಿಳಿಮುದಿಲ್ಲರಸ ವಿಪ್ರೇಂದ್ರನರಿಯಂ ವ ।
ನಾಂತರಮೊಳಾಸಿಂಹಮೆಂದ ನುಡಿ ಶಾಸ್ತ್ರ ಸಿ ।
ದ್ಧಾಂತಮಂಗನೆ ಪುರುಷನರ್ಧಾಂಗಮೆಂಬುದಕೆ ನಿನ್ನ
ವಾಮಾಂಗಿಯಾದ ॥

ಕಾಂತೆಯಂ ಬೇಡಿದೊಡೆ ಕೊಯ್ದು ಕಾಯುವನೀವ ।
ಭ್ರಾಂತಿಯೇತಕೆ ತನ್ನಯಸುವೆರಸಿ ಕೊಟ್ಟು ಕಳೆ ।
ತಾಂ ತಳೆವೆನ್ನೈದೆತನದಿಂದೆ ಸದ್ಗತಿಯನೆಂದಾಕುಮುದ್ವತಿ
ನುಡಿದಳು ॥೨೯॥

ಪುತ್ರನಿಂಗಹುದೆಂದರೆಲ್ಲರುಂ ಭೂವರಂ |
ಪುತ್ರನಿರೆ ಕಂಡನೀತೆರನಂ ದ್ವಿಜತ್ವಮುಂ |
ನೆಮ್ಮಿದ ಮುಕುಂದನೆಲೆರಾಯ ನಿನ್ನರಸಿ ನುಡಿದುತ್ತರವ
ನೊಪ್ಪಬಹುದು ||

ಸುಮ್ಮಾನದಿಂ ಜನೇಶ್ವರನ ದಕ್ಷಿಣಭಾಗ |
ಮುಪ್ಪಲ್ಕೆನೆಂದು ಪೂಕ್ಕಣಿಸಿತಲ್ಲವೆ ಸಿಂಹ |
ವೆಮ್ಮೊಡನೆ ವಾಮಾಂಗವೊಂದಾಡಿತಿಲ್ಲೆನಲ್ನೃಪನಸುತ
ನಿಂತೆಂದದು ||೩೦||

ಕರುಣಿಸಲೆ ವಿಪ್ರ ನಿನ್ನಂ ಬೇಡಿಕೊಂಬೆ ನಾಂ |
ತರುಣಂ ಸುಪುಷ್ಟವಪು ತುಷ್ಟಿ ಮೃಗಪತಿಗಾಗ |
ದಿಂದು ತಾತನ ಋಣತ್ರಯಕೆ ಹರಿಪಹುದು ರಾಘವ ಭೀಷ್ಮ
ರಂತೆ ಕೀರ್ತಿ ||

ಸ್ಥಿರವಹುದು ಪಿತನ ಭಾಷೆಗೆ ನಿಲಿಲ್ಜನಕನವ |
ತರಿಸನಾತ್ಮಜನಾಗಿ ತಂದೆ ಮಕ್ಕಳಿವರೊಳ್ |
ಗೆರವಿಲ್ಲ ತನ್ನಂಗಮುಂ ತೆಗೆದುಕೊಳ್ಳೆಂದು ತಾಮ್ರಧ್ವಜಂ ||
ನುಡಿದನು ||೩೧||

ಭೂಪಾಲ ಕೇಳವನ ಮಾತಿಗೆ ಮಹೀಸುರಂ
ಕಾಪಟ್ಯಮಿಲ್ಲೆಲೆ ಕುಮಾರ ನೀನೆಂದ ನುಡಿ |
ಪಾಪಿ ಕೇಸರಿ ತನ್ನೊಳವನಿಪನ ಸತಿಯೆಂದು ಸುತನೆಂದು
ಪೇಳ್ದುದಿಲ್ಲ ||

ಆಪೊಡೆ ಮಯೂರಧ್ವಜನ ದಕ್ಷಿಣಾಂಗಮುಂ |
ತಾ ಪುತ್ರನಂ ಬಿಡುವೆನೆಂದೊಡಿಲ್ಲಿಗೆ ಬಂದೆ |
ನೀಪರಿಯೊಳಳುಕುವರೆ ಕುಡಬೇಡ ಪೋಪೆನೆನೆ ನರನಾಥ
ನಿಂತೆಂದನು ||೩೨||

ರಾಣಿಯಂ ಕುಡುವುದಿಲ್ಲಾತ್ಮಜನನೀವುದಿ
ಲ್ಲಾಣೆಯಂ ತನ್ನ ಭಾಷೆಗೆ ಬಾರದಂತಚ್ಚು
ಪಾಣಿ ಮೆಚ್ಚುವೊಲರ್ಧದೇಹವಂ ಕೊಯ್ದು ಕೊಟ್ಟಪೆ
ನೀಗ ಸೈರಿಸೆನುತ ||

ಸಾಣೆವಿಡಿದಿರ್ದ ಕರಪತ್ರಮಂ ಕುಡಿಸಿದಂ ||
ಪ್ರಾಣನಾಥೆಯು ಕೈಯೊಳಿನ್ನುತ್ತಮಾಂಗಮಂ
ಕೇಣವಿಲ್ಲದೆ ತನುಜನಂ ಕೂಡಿಕೊಂಡು ನೀಂ ಸೀಳೆಂದು
ನೇಮಿಸಿದನು ||೨೨||

ಬಾಲಲೀಲೆಗಳಿಂದೆ ನಂದನಂ ತರುಣಿ ಪತಿ
ಕಾಲದೊಳ್ಸುಖದಿಂದೆ ಸೀಳಲ್ಕೆ ನೊಂದುವೆ ವಿ
ಶಾಲಾಕ್ಷಿ ತನಗಿದು ವಿನೋದವುಸಿಪತ್ರದಿಂ ಪೂಸು ಸೀಳೆಗ
ನೀನು ||

ಆಲಸ್ಯಮಂ ಮಾಡದಿರೆವುದೀ ಮಸ್ತಕದ
ಮೇಲಣಿಂದಿಳಿಯೆ ನುಂತಾಗಿ ತನ್ನಂಗಮಂ
ಪಾಲೆರಡು ಸಮನಾಗೆ ಗರುಡ-ಹನುಮಂತರ್ಗೆ ಚಕ್ರಿ
ಪಣ್ಣಿಂಚಿದಂತೆ ||೨೪||

ಆ ಮಹೀಪಾಲನೀ ತೆರದೊಳ್ಸುನುಡಿತಿಗೆ
ನೇಮಿಸೆ ಕುಮಾರನಂ ಕೂಡಿಕೊಂಡವಳತಿ
ಪ್ರೇಮದಿಂ ಕರಪತ್ರಮಂ ಕೊಂಡು ಮುನ್ನ ದೈತ್ಯನ ನಿಂತು
ಸೀಳ್ದನೆಂದು ||

ಆ ಮಹಾಸಭೆ ನಾರಸಿಂಹನಂ ನೆನೆವಂತೆ
ರಾಮರಾಮೆಂದು ಜಪಿಸುತೆ ಕೊಯ್ದಳವನಿಪತಿ
ರೋಮಣಿಯು ಮಸ್ತಕವನೆರಡಾಗಿ ಸರಿಸದಿಂದೋರೆ
ಕೋರೆಗಳಿಲ್ಲದೆ ||[illegible]||

ಪೆಂಡತಿಯೊಳಾತ್ಮಜನೊಳರಸನೊಪ್ಪಿಗೆ ನೋಡಿ ।
ಕಂಡುವಿಲ್ಲೊಂದಿನಿಸು ಖಯ ಖೋಡಿಯುಂ ಬಳಿಕ ।
ಪುಂಡರೀಕಾಂಬಕಂ ನೃಪನ ವಾಮಾಕ್ಷಿಯೊಳ್ಕಂಬನಿಗಳೊಸರು
ತಿರಲು ॥

ಅಂಡಲಿಯೊಳಳುತಳುತೆ ಕುಡುವವನ ದಾನಮುಂ ।
ಕೊಂಡಪರಿ ಬಾಧಕಕಟ ಶೋಕದೊಳ್ಕೀಡುವಂ ।
ಭಂಡನೆನುತೊಡಮುರಿದು ತಿರುಗಿದಂ ತನಯನಂ ತಿನಲಿ ಹರಿ
ಬಸದೊಳಿನುತ ॥೩೬॥

ಬೆರಗಾದಳಾ ಕುಮುದ್ವತಿ ನುಡಿದಳರಸಂಗೆ ।
ಬರಿವೆಕೊಯ್ಸುವೆ ನಿನ್ನ ಪುಸ್ತಕವನೆಡಗಣ್ಣೊ ।
ಳೊರೆವ ಕಂಬನಿಗಳಂ ಕಂಡಾದ್ವಿಜೋತ್ತಮಂ ನೀನಳುತೆ
ಕುಡುವೆಯೆಂದು ॥

ಪೊರಮಟ್ಟು ಪೋದನಲ್ಲದೆ ವಿಫಲವಾದುದ ।
ಕ್ಕರೊಳಿತ್ತ ದಾನಮಿದಕೆಂತೆನಲ್ಭೂಪರಂ ।
ಮರುಗಿ ಕರೆಸಾತನಂ ತಿಳಿಪುವೆಂ ಪೋಳ್ಗಳೆರಡಂ
ಕೂಡಿ ಪಿಡಿಯೆಂದನು ॥೩೭॥

ಬಳಿಕಾ ಕುಮುದ್ವತಿ-ನರೇಂದ್ರ ಪುಸ್ತಕದ ಪೋ ।
ಳ್ಗಳನೊಂದುಗೂಡಿ ಪಿಡಿದಾಗ ನಿಜತನಯನಂ ।
ಕಳುಹಲವನಾ ಪಾರ್ವನಂ ತಡೆದೊಡಂಬಡಿಸಿ ವಿನಯದಿಂ
ಕರೆತರಲ್ಕೆ ॥

ತಿಳಿಪಿದಂ ಭೂಪನೆಲೆ ವಿಪ್ರ ಕರಪತ್ರಹತಿ ।
ಗಳುಕಿತಿಲ್ಲುಪಕಾರಕಾಯ್ತು ದಕ್ಷಿಣಭಾಗ ।
ಮುಳಿದುದು ನಿರರ್ಥಕಂ ವಾಮಾಂಗಮೆಂದೊಸರಿತೆಡಗಣ್ಣ
ಜಲಮೆಂದನು ॥೩೮॥

ಮೆಚ್ಚಿದಂ ನೃಪನೆಂದ ಮಾತಿಗೆ ಮುರಧ್ವಂಸಿ ।
ಹೆಚ್ಚಿರ್ದ ರಾಯನ ಕಳೇಬರದ ಪೋಳ್ಗಳಂ ।
ಬೆಚ್ಚು ಕಾರುಣ್ಯದಿಂ ನೈದಡವಿತಕ್ಕೈಸಿ ನಿನ್ನಂ ಪರೀ
ಕ್ಷಿಸಿದೆನು ॥

ನಿಚ್ಚಟದ ಭಕ್ತಿಯಂ ಕಂಡೆನಿವನರ್ಜುನಂ ।
ಮುಚ್ಚುಮರೆಯೇಕಿನ್ನು ತಾನೀಗ ಕೃಷ್ಣನೆಂ ।
ದೆಚ್ಚರಿಸಿ ನಿಗಮದರಿಕೆಯ ತನ್ನ ಸಾಕಾರ ಮೂರ್ತಿಯಂ
ತೋರಿಸಿದನು ॥೩೯॥

ವರ ಸುಪ್ರಸನ್ನವದನದ ಕಮಲನೇತ್ರದ ಮ ।
ಕರಕುಂಡಲದ ಲಲಿತ ನಾಸಿಕದ ಪಣೆಯ ಕ ।
ಸ್ತುರಿಯ ತಿಲಕದ ಮುರಿದ ಪುರ್ಬುಗಳ ಸುಳಿಗುರುಳ
ಮಣಿ ಮಕುಟದೆಳದೊಳಸಿಯ ॥

ಕೊರಲ ವನಮಾಲೆಗಳ ಕೌಸ್ತುಭ ಶ್ರೀವತ್ಸ ।
ದುರದ ಚಂದನದ ನಳಿತೋಳ್ಗಳ ಘನಾಂಗ ಸೌಂ ।
ದರಿಯದವಯವದ ಸರ್ವಾಭರಣ ಭೂಷಿತದ ಹರಿ ನೃಪನ
ಮುಂದೆಸೆದನು ॥೪೦॥

ನೋಡಿದಂ ಕಣ್ತಣಿಯೆ ಬಳಿಕಿಳೆಗೆ ತನುವನೀ ।
ಡಾಡಿ ದಂಡ ಪ್ರಣಾಮಂ ಗೈದು ಭೂವರಂ ।
ಮಾಡಿದಂ ನಿಗಮಾರ್ಥದನುಪಮ ಸ್ತುತಿಗಳಂ ಮುರ-
ಹರನ ಮುಂದೆ ನಿಂದು ॥

ಕೂಡೆ ತಾಮ್ರಧ್ವಜ ಕುಮುದ್ವತಿಗಳೆರಗಿದ ।
ರ್ಮಾಡಿದಾನಂದದಿಂ ತಮತಮಗೆ ಕೈಮುಗಿದು ।
ಬೇಡಿಕೊಳುತಿರ್ದುದು ಮಹಾಸಭೆ ಮುಕುಂದನಂ ಜಯ
ಜಯ ನಿನಾದದಿಂದೆ ॥೪೧॥

ಪನ್ನಗಾರಿಧ್ವಜಂ ಬಳಿಕಾ ನೃಪಾಲನಂ ।
ಮನ್ನಿಸಿ ಕೃತಾರ್ಥನಹೆ ನೀನರ್ಥದೇಹಮಂ ।
ನನ್ನಿಯಿಂದೀಯೆ ಮೆಚ್ಚಿದೆನೀಗ ನಿನಗೆ ಸಂಗ್ರಾಮದೊ
ಳ್ತಾಮ್ರಕೇತು ॥

ನಿನ್ನ ಪಡೆಯೆಲ್ಲಮುಮನೀ ಸವ್ಯಸಾಚಿಯುಮು ।
ನೆನ್ನವಂ ಮೂರ್ಛೆಗಾಣಿಸಿ ಕೆಡಹಿ ಬಂದುದಕೆ ।
ಮುನ್ನೆ ಹರ್ಷಿತನಾದೆನಿನ್ನು ಸತಿಸುತರೊಡನೆ ಮಾಡು
ಯಜ್ಞವನೆಂದನು ॥೪೨॥

—ಲಕ್ಷ್ಮೀಶ.



# ಪರಿಚಯ

ಈ ಭಾಗವನ್ನು ಲಕ್ಷ್ಮೀಶ ಕವಿವರನ ಜೈಮಿನಿಭಾರತ ಸಂಧಿ ೨೬ ರಿಂದ ಆಯ್ದುಕೊಂಡಿದೆ. ಲಕ್ಷ್ಮೀಶನು ಪಂಡಿತನು. ಪಂಪನಂತೆ ಉತ್ತಮ ಸಂಗ್ರಾಹಕ. ಮೇಲ್ಮಟ್ಟದ ಕತೆಗಾರ. ಈ ಕಾವ್ಯವು ಪಂಡಿತರಿಗೂ ಸಾಮಾನ್ಯ ಜನರಿಗೂ ಪ್ರಿಯವಾಗಿದೆ. ಇದರ ಸವಿಯನ್ನು ಅನೇಕರು ಉಂಡು ಸಂತುಷ್ಟರಾಗಿದ್ದಾರೆ. ಆಗುತ್ತಲೂ ಇದ್ದಾರೆ.

ಇವನ ಕಾಲದೇಶಗಳ ವಿಷಯವಾಗಿ ನಿಷ್ಕೃಷ್ಟವಾಗಿ ಏನನ್ನೂ ಹೇಳಬರುವಂತಿಲ್ಲ. ಇವನು ಬರೆದ ಗ್ರಂಥದ ಆಧಾರದ ಮೇಲೆಯೇ ಈತನು "ಕರ್ನಾಟ-ಕವಿಚೂತವನ ಚೈತ್ರ" ಎಂಬ ಬಿರುದುಳ್ಳವನೆಂದೂ ದೇವಪುರದ ಲಕ್ಷ್ಮೀರಮಣನ ಭಕ್ತನೆಂದೂ ಹೇಳಬಹುದು.

ಇವನ ಕಾಲದ ವಿಷಯವು ಇನ್ನೂ ಚರ್ಚೆಗೆ ಕಾರಣವಾಗಿದೆ. ಆದರೂ ಈಗ ಉಪಲಬ್ಧವಾದ ಆಧಾರಗಳಿಂದ ಇವನು ಕ್ರಿ. ಶ. ೧೫೫೦ ಕ್ಕಿಂತ ಹಿಂದೆ ಇದ್ದಿರಬಹುದೆಂದು ಹೇಳಬಹುದು.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಕೃಷ್ಣನು ವಿಪ್ರವೇಷದಿಂದ ಏಕೆ ಬಂದನು ? (೨) ಬ್ರಾಹ್ಮಣನು "ಸ್ವಸ್ತ್ಯಸ್ತು" ಅನ್ನಲು, ಮಯೂರಧ್ವಜನು ಗಾಬರಿಯಾದ ಕಾರಣವೇನು ? (೩) ಸಿಂಹ ಮತ್ತು ಬ್ರಾಹ್ಮಣನ ಸಂವಾದವನ್ನು ಸಂಗ್ರಹಿಸಿ ಬರೆಯಿರಿ. (೪) ಬಂದ ಬ್ರಾಹ್ಮಣನು ಧೂರ್ತನಿದ್ದನೆಂದು ಹೇಗೆ ಗೊತ್ತಾಗುವುದು ? (೫) ಮಯೂರಧ್ವಜನು ತನ್ನ ಶರೀರಭಾರವನ್ನು ದಾನ ಕೊಡಲು ಯಾವ ಸಿದ್ಧತೆಯನ್ನು ಮಾಡಿದನು ? (೬) ದಾನ ಕೊಡುವ ಪದ್ಧತಿಯನ್ನು ಕವಿಯು ಹೇಗೆ ಚಿತ್ರಿಸಿದ್ದಾನೆ ?(೭) ಮಯೂರ-ಧ್ವಜನ ಯಾವ ಯಾವ ಗುಣಗಳು ಇಲ್ಲಿ ಕಂಡು ಬರುತ್ತವೆ ?

ಸ್ಪಷ್ಟೀಕರಿಸಿರಿ:—

(೧) ಬಲಿಯಧ್ವರಕೆ ವಾಮನಂ ಬಂದಂತೆ.

(೨) "ಅಂಡಲೆಯೊಳಳುತಳುತ ಕುಡುವವನ ದಾನವಂ ಕೊಂಡ ಪರೆ ಬುಧರ್"

(೩) ಮಕ್ಕಳಿಲ್ಲದವರ್ಗೆ ಲೋಕವಿಲ್ಲ.

(೪) ಪರಪುರುಷಾರ್ಥಕೆಳಸುವಂ ನೆಲದ ಮೇಲಣ ಬಾಳ್ಕೆಯಂ ನಿಜಶರೀರಮಂ ನೆಲೆಯೆಂದು ನೋಡುವನೇ ?

(೫) ಕೀರ್ತಿ ನಿಲ್ವುದು ನರರ ಬಾಳ್ದಿಟವಲ್ಲ.

(೬) ಪರೋಪಕೃತಿಗಲ್ಲದ ಮನುಜನ ಬಾಳ್ಪಣಬುರಿದ ಬೂದಿಯಂತಪ್ಪು.

(೭) 'ಸಮೂಹ' ಈ ಅರ್ಥದ ಸಮಾನ ಪದಗಳು ಯಾವವು ?

(೮) ಸಿಂಹ ಮತ್ತು ಕೃಷ್ಣ ಈ ಅರ್ಥ ಹೇಳುವ ಪದಗಳನ್ನು ಸಂಗ್ರಹಿಸಿರಿ.

**ಸಮಾಸ.**

ಪನ್ನಗಾರಿಧ್ವಜ, ಕರಪತ್ರ, ಮುರಧ್ವಂಸಿ, ಮುಂಗಾರ, ಮೈದಡವಿ

**ಟಿಪ್ಪಣಿ ಬರೆಯಿರಿ.**

ದಧೀಚಿಯ ತ್ಯಾಗ, ಋಣತ್ರಯ.

**ತತ್ಸಮ ತದ್ಭವ ಹೇಳಿರಿ.**

ಸಂಧ್ಯಾ, ಕತ್ತುರಿ, ಸಿಂಗ, ನಿಚ್ಚ, ರಾಯ, ಇಳೆ,

## ಕಠಿಣ ಶಬ್ದಾರ್ಥ.

೩೦ ಅವಜ್ಞೆ =ಅವಮಾನ, ೩೨ ಮುಖ= ಯಜ್ಞ, ಶಿಖಿ= ಮಯೂರ; ೩೫ ಅಕ್ಕಜ= ಆಶ್ಚರ್ಯ; ೩೮; ಪ್ರೋಕ್ತ= ಮಾತು, ಮಾಜು= ಬಚ್ಚಿಡು; ೪೫ ಪ್ರಚ್ಛನ್ನ= ವೇಷಧಾರಿಯಾದ; ೪೯ ಸೈತಿಡು= ಸಂತೈಸು; ೫೦ ಸುದಾಮ =ಸರಪಳಿ; ೫೧ ಕಟ್ಟಾಸುರ =ಕಠೋರ, ನಿರ್ಧಯ; ೫೨ ಕುರರೀಗಣ =ಕುರಿಹಿಂಡು; ೫೩ ಬೆಗಡುಗೊಂಡು, ಅಂಜಿ; ೫೫ ಸೂದಕರ್ಮಜ್ಞ= ಕೊಲೆಗಡಕ; ೫೭ ಪ್ರೊಕ್ಕಣಿಸು= ಹೇಳು; ೬೦ ಕೇಣವಿಲ್ಲದೆ= ಹಿಂದುಮುಂದು ನೋಡದೆ, ಉತ್ತಮಾಂಗ= ತಲೆ; ೬೪ ಖಯಖೋಡಿ= ದೋಷ.

## ೪. ಅಭಿಮನ್ಯುವಿನ ಪೌರುಷ.

ಆ ಮಹಾ ಮೋಹರವನೊಡೆಯಲು |
ಸೋಮಕುಲಜರು ಭೀತರಾದರು |
ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ ||
ರಾಮನರಿವನು ಕೃಷ್ಣನರಿವನು |
ಸೀಮೆಯಲಿ ಕಲಿಪಾರ್ಥನರಿವನು |
ಭೂಮಿಪತಿಗಳೊಳುಳಿದ ಸುಭಟರಿಗರಿವುದಿಲ್ಲೆಂದ ||೧||

ಹೊಗಲು ಬಲ್ಲನು ಹೊಕ್ಕವೊಲು ಹೆರ |
ಡೆಗೆಯಲರಿಯನು ವೀರ ಪಾರ್ಥನ |
ಮಗನು ಮತ್ತಯ್ದನೆಯ ಸುಭಟರ ಕಾಣೆ ನಾನೆನುತ ||
ಅಗಿವ ಚಿಂತೆಯೊಳರಸ ಕದನದ |
ದುಗುಡ ಭಾರದಲಿರಲು ಮುಂಗೈ |
ನಿಗಳವನು ತಿರುಹುತ್ತ ನಸುನಗುತಿದ್ದನಭಿಮನ್ಯು ||೨||

ಜನಪನಂಘ್ರಿಗೆ ಮಣಿದು, ಕೈಮುಗಿ |
ಡೆಸಗೆ ಬೆಸಸೈ ಬೊಪ್ಪ ತಾ ಬ |
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ ||
ಅಸುವರವವ ಗೆಲುವೆನು, ಕೃತಾಂತನ |
ಮನೆಗೆ ಕಳುಹುವೆನಹಿತರನು, ನೀ |
ನಿನಿತು ಚಿಂತಿಸಲೇಕೆ ಕಾಳಗಕೆನ್ನ ಕಳುಹೆಂದ ||೩||

ಹಸುಳೆಯುದಟಿನ ನುಡಿಯ ಕೇಳಿದ ।
ನಸುನಗುತ ಧರ್ಮಜನು, ಘನ ಪೌ ।
ರುಷವು ನಿನಗುಂಟೆಂದು, ಕಂದನ ತೆಗೆದು ಬಿಗಿಯಪ್ಪಿ ॥
ಶಿಶುವು ನೀನೆಲೆ ಮಗನೆ ಕಾದುವ ।
ರಸನು ಬಲರು ಕರ್ಣ ಮಹಾರಥ ।
ರೆಸುಗೆಯನು ನೀನೆಂತು ಸೈರಿಸಲಾಪೆ ಹೇಳೆಂದ ॥೪॥
ಸುಳಿಯಬಹುದಂಬುಧಿಯ ನಡುವಣ ।
ಸುಳಿಯೊಳಗೆ, ಸಂವರ್ತಕನ ಕೊರ ।
ಳೊಳಗೆ ಕುಣಿಯಲುಬಹುದು, ಮೃತ್ಯುವಿನಣಲಹೊಳ
ಲೊಳಗೆ ॥
ಹೊಳಕಬಹುದಹಿಪನ ಫಣಾ ಮಂ ।
ಡಳದೊಳಾಡಲುಬಹುದು, ಕಾಣೆನು ।
ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ ॥೫॥
ಬಿಡು ಮರೀಚಿಯ ತೊರೆಗೆ ಹರುಗೋ ।
ಲಿಡುವರುಂಟೇ ಲೆಪ್ಪದುರಗನ ।
ಹಿಡಿವಡೇತಕೆ ಗರುಡ ಮಂತ್ರವು, ಚಪಲನೆನ್ನದಿರು ॥
ಕೊಡತನ ಮಗನ ಕುಮಂತ್ರದೊಡ್ಡಿನ ।
ಕಡಿತಕಾನಂಜುವೆನೆ, ವೆಗ್ಗಳ ।
ನಡಿಯಲವ್ಮ್ಮನು, ತನ್ನನೀಗಳೆ ಬಿಟ್ಟು ನೋಡೆಂದ ॥೬॥
ಆವರೊಳಗಲಕೆ ನಿಂದ ರಿಪುಗಳ ।
ಜವನ ಬ್ಬೋನವ ಮಾಡದಿದ್ದರೆ ।
ಆವನಿಯನು ಗೆಲದೇ ಮಹಾರಥರೆನಿಪ ನಾಯಕರ ॥
ಆವನಿಯೊಳಗೊಂಗಿಸದೆ, ಮಾರಾಂ ।
ತವರ ಸುಂಗದೆ ಮಾಣ್ದೆನಾದರೆ ।
ದಿವಿಜ ಪತಿ ತನಯಂಗೆ ತಾ ಜನಿಸ್ಸಿದವನಲ್ಲೆಂದ ॥೭॥

ಕಂದ ವೈರಿವ್ಯೂಹವಸವಳ |
ವೆಂದೆನಿಪುದದರೊಳಗೆ ಕೃಪಗುರು- |
ನಂದನರು ರಾಧೇಯ ಭೂರಿಶ್ರವ ಜಯದ್ರಥರು ||
ಇಂದುಧರನಡಹಾಯ್ದು ರೊಮ್ಮೆಗೆ |
ಹಿಂದುಮುಂದೆನಿಸುವರು ನೀ ಗೆಲು !
ವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ ||೮||

ಗಾಳಿ ಬೆಮರುವದುಂಟೆ, ವಹ್ನಿ- |
ಜ್ವಾಲೆ ಹಿಮಕಂಜುವದೆ, ಮಂಜಿನ |
ಮೇಲುಗಾಳಿಗವುಂಟೆ ಬಲು ಬೇಸಗೆಯ ಬಿಸಿಲೊಳಗೆ ||
ಬಾಲನಿವನೆನ್ನದಿರು, ದುಗುಡವ |
ತಾಳಲಾಗದು ಬೊಪ್ಪ ನಿಮ್ಮಡಿ |
ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪು ಬಲವ || ೯||

ಅಹುದು ಮಗನೆ ಸಮಗ್ರ ಬಲ ನೀ |
ನಹೆ ನಿಧಾನಿಸಲಿಂದು ಪವನಜ |
ಸಹವ ಮುರಿದರು, ಕಾಯ್ದು ಬಿಟ್ಟರು ನಕುಲ ಸಾತ್ಯಕಿಯ ||
ಸಹಸ, ದ್ರುಪದ, ವಿರಾಟರುಗಳು |
ವ್ಯೂಹವ ಸೆಳೆದರು ವಿಜಯ ಗರ್ವದ |
ಲಿಹ ಬಲವ ನೀನೊಬ್ಬನೇ ಸಾಧಿಸುವುದರಿದೆಂದ ||೧೦||

ಧರಣಿಪತಿ ಕೇಳುಳಿದ ಪುಷ್ಪದ |
ಪರಿಮಳವು ಪಥಿಸಿದರೆ ಸಂಪಗೆ |
ಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ ||
ಅರಿಭಟರು ಭೀಮಾದಿಗಳ ಗೆಲಿ |
ದಿಳಿಲಿ ಹೊಲ್ಲಹವೇನು ಘನ ಸಂ |
ಗರದೊಳಗೆ ನನ್ನೊಡನೆ ತುಡುಕಿದಡರಿಯ ಬಹುದೆಂದ ||೧೧||

ಕೈದುಕಾರರ ಬಿಗುಹು ಘನ, ನೀ ।
ಹೊಯ್ದು ಮೊದಲಲಿ ಬಿಡಿಸು ಬಳಿಕಾ ।
ವೈದಿ ನಿನ್ನನು ಕೂಡಿಕೊಂಬೆವು ಹೊಕ್ಕು ಬಳಿ ಸಲಿಸಿ ॥
ಎಯ್ದೆ ಹಗೆಯಲಿ ಹೂಣಿ ಹೊಗದಿರು ।
ಮೈದೆಗೆದು ಕಾದುವುದು ಜಯ ಸಿರಿ ।
ಐದೆತನ ನಿನ್ನಿಂದ ಮೆರೆವುದು ಕಂದ ಕೇಳೆಂದ ॥೧೨॥

ಕೆತ್ತುಕೊಂಡಿರೆ ಬಿಡಿಸುವೆನು ರಥ ।
ವೆತ್ತಲುರುಬಿದರತ್ತ ಕಣನೊಳು ।
ಮತ್ತ ಗಜ ಮುರಿದಂತೆ ಕದಡುವೆನಹಿತ ಮೋಹರವ ॥
ಹೊತ್ತಿ ಹೊಗೆವ ಪರಾಕ್ರಮಾಗ್ನಿಯು ।
ತುತ್ತು ಪದ್ಮವ್ಯೂಹ, ದೇವರು ।
ಚಿತ್ತಯಿಸುವುದು ಹೊತ್ತುಗಳೆಯದೆ ಎನ್ನ ಕಳುಹೆಂದ ॥೧೩॥

ಶರನಿಧಿಯು ವಡಬಾನಳನ ದ ।
ಳ್ಳುರಿಯ ಮರ್ಮವ ತಿವಿವ ತುಂಬಿಗೆ ।
ಮರಳುದಲೆಯುಂಟಾದಡದು ಭವ-ಭವದ ಪುಣ್ಯಫಲ ॥
ಅರಿಬಲವ ನೀ ಖಂಡಿಗಳೆ, ಮೋ ।
ಹರ ಸಹಿತ ನಾ ಬಹೆಸು ನಡೆಯೆಂ ।
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ ॥೧೪॥

ಶಿವ ಶಿವಾ ಶಿಶುವಿವನು ರಿಪುಗಳು ।
ಜವನ ಜೂಜೆನಿಸುವ ಮಹಾರಥ ।
ನಿವಹಕೊಬ್ಬನೆ ಗಡ ಸಮಾಹಿತವಲ್ಲ ಸಮರಂಗ ॥
ಅವನಿಪತಿ ನಿರ್ದಯನಲಾ ಕಂ ।
ಡೆವು ಕುಮಾರನನಿಕ್ಕಿ ಬಹ ರಾ ।
ಜ್ಯವನು ಸುಡು ಸುಡಲೇತಕೆಂದುದು ನಿಖಿಳ ಪರಿವಾರ ॥೧೫॥

ಲಲಿತ ಚಂದ್ರಿಕೆಗೇಕೆ ದಾವಾ ।
ನಳನ ಖಾಡಾಖಂಡಿ ಷುಾಲತೆ ।
ಯೆಳೆಯ ಕುಡಿ ಮುರಿದೊತ್ತಲಾಪುದೆ ವಜ್ರಧಾರೆಗಳ ॥
ನಳಿನ ನಾಳವು ಗಜದ ಕೈಯೊಡ ।
ನಳವಿಗೊಡಲಂತರವೆ ಪಾಪಿಗ ।
ಳೆಳಮುಗನ ನೂಕಿದರು ಕಾಳೆಗಕೆಂದುದಮರಗಣ ॥೧೬॥

ಬಿಗಿದ ಗಂಡುಡಿಗೆಯಲಿ ಹೊಸ್ನಾ ।
ಯುಗದ ಹೊಳೆವ ಕಠಾರಿಯಸು ಮೊನೆ ।
ಮುಗುಚಿ, ಸಾಧು ಜವಾಜಿ ಕತ್ತುರಿ ಗಂಧ ಲೇಪದಲಿ ॥
ಮುಗಮುಗಿಪ ಹೊಂದೊಡರ ಹಾರಾ ।
ದಿಗಳಲೊಪ್ಪಂ ಬಡೆದು ನಸು ನಗೆ ।
ಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು ॥೧೭॥

ಉಲಿವ ಘಂಟೆಯು, ಕುಣಿವ ತುರಗಾ ।
ವಳಿಯು, ಗಗನದೊಳಗಿವ ಬಿರುದಿನ ।
ಪಳಹರದ, ತೆತ್ತಿಸಿದ ಕನಕದ ಚೌಕ ಸತ್ತಿಗೆಯ ॥
ಘುಳುಘುಳಿಪ ಚೀತ್ಕಾರ ಕೋಳಾ ।
ಹಳದ ಸೂತನ ರೇಖೆಯಲಿ ಭಟ ।
ಕುಲ ಲಲಾಮನ ತೇರು ಬಂದುದು ತೀವಿದಸ್ತ್ರದಲಿ ॥೧೮॥

ತುರಗ ತತಿಗಭಿನಮಿಸಿ, ರಥವನು ।
ತಿರುಗಿ, ಬಲವಂದೆರಗಿ ಚಾಪಕೆ ।
ಕರವ ನೊಸಲಲಿ ಚಾಚಿ ಭಾರಿಯ ಭುಜವನೊದರಿಸುತ ॥
ಅರಸಗಭಿವಂದಿಸುತ, ಭೀಮನ ।
ಹರಕೆಗಳ ಕೈಕೊಳುತ, ನಕುಳಾ ।
ದ್ಯರಿಗೆ ಪೊಡವಟ್ಟಡರಿದನು ನವ ರತುನಮಯ ರಥವ ॥೧೯॥

ಸೂಳವಿಸಿದವು ಲಗ್ಗೆಯಲಿ ನಿ ।
ಸ್ಸಾಳ ತತಿ, ಸಿಡಿಲೆರಗಿತೆನಲು ।
ಬ್ಬಾಳು ಮಿಗೆ ಕೈನೆಗಹಿ ಕೈವಾರಿಸುವ ಗಮಕಿಗಳು ॥
ಸಾಲ ಹೆಗ್ಗಹಳೆಗಳು ರಿಪು ಭೂ- ।
ಪಾಲಕರ ಬೈಬೈದು ಗಜರಿದ ।
ವಾಳುತನದಾಳಾಪ ಬೀರಿತು ಬೆರಗನಹಿತರಿಗೆ ॥೨೦॥

ಒಡನೆ ಕಳುಹುತ ಬಂದನಾ ನೆಲ ।
ದೊಡೆಯನನುಜರು ಸಹಿತ, ನಯನದಿ ।
ಬಿಡುವಸಿಯು ಸಾಲಿನಲಿ ನನೆದರು ಬಂದು ಕಿರಿದೆಡೆಯ ॥
ನಡೆ ವಿಜಯನಾಗೆಂದು ತನುವನು ।
ತಡವಿದರು ಕಡು ಮೋಹವೆಡೆಯಾಲಿ ।
ಘುಡುಘುಡಿಸೆ ಶಿಶು ಬೀಳುಕೊಂಡನು ಪಿತೃ ಚತುಷ್ಟಯವ ॥೨೧

— ಕುಮಾರವ್ಯಾಸ.



# ಪರಿಚಯ.

ವರಕವಿ ಕುಮಾರವ್ಯಾಸನು ಧಾರವಾಡ ಜಿಲ್ಲೆಯಲ್ಲಿರುವ ಕೋಳಿವಾಡ ಗ್ರಾಮದ ಶಾನುಭೋಗರ ಮನೆತನದವನು. ಇವನು ಗದುಗಿನ ಶ್ರೀ. ವೀರನಾರಾಯಣನ ಭಕ್ತನಾಗಿದ್ದುದರಿಂದ ಅಲ್ಲಿಗೆ ಹೋಗಿ ಅವನ ವರಪ್ರಸಾದದಿಂದ ಈ ಮಹಾಕಾವ್ಯವನ್ನು ಬರೆದನೆಂದು ಪ್ರತೀತಿಯಿದೆ.

ಈತನ ಕವಿತಾ ಸಾಮರ್ಥ್ಯವು ಬಹು ಹಿರಿದು. ‘‘ಹಲಗೆ ಬಳಪವಹಿಡಿಯದೊಂದಗ್ಗಳಿಕೆ, ಪದವಿಟ್ಟಳುಪದೊಂದಗ್ಗಳಿಕೆ, ಪರರೊಡವದ ರೀತಿಯ ಹಿಡಿಯದಗ್ಗಳಿಕೆ ಬಳಸಿ ಬರೆಯಲು ಕಂಠಪತ್ರದವುಲಿಹುಗೆಡದಗ್ಗಳಿಕೆ’’ ಎಂದು ತಾನೇ ಹೇಳಿಕೊಂಡಿದ್ದಾನಷ್ಟೇಯಲ್ಲ ಅದರಂತೆ ಬರೆದು ತೋರಿಸಿದ್ದಾನೆ.

ಇವನು ಮೇಲು ಮಟ್ಟದ ಕವಿ. ಅವನವೇ ಆದ ಕೆಲವು ವಿಶೇಷ ಗುಣಗಳು ಅವನಲ್ಲುಂಟು. ವಸ್ತು ರಚನೆ, ಪಾತ್ರ ಪೋಷಣೆ, ವರ್ಣನೆ, ಶೈಲಿ ಮೊದಲಾದವುಗಳಲ್ಲಿ ಈ ಕಾವ್ಯವು ಎಷ್ಟೋ ಪ್ರೌಢಕಾವ್ಯಗಳಿಗಿಂತ ಶ್ರೇಷ್ಠತರವಾಗಿದೆ. ಅವನ ಕಾವ್ಯವನ್ನು ಓದುವುದರಿಂದ ಭಾರತದ ಚಿತ್ರವು ನಮ್ಮ ಮುಂದೆ ನಿಲ್ಲುತ್ತದೆ ‘‘ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗವುದು, ಮೈಯಲಿ ಮಿಂಚಿನ ಹೊಳೆ ತುಳುಕಾಡುವುದು’’ ಎಂದು ಶ್ರೀ ಪುಟ್ಟಪ್ಪನವರು ಹೇಳಿದ ಮಾತು ಯಥಾರ್ಥವಿದೆ. ಇವನ ಕಾಲ ೧೬ನೇ ಶತಮಾನ.

## ಸಂಧರ್ಭ.

ಸಂಸಪ್ತಕರ ಜೊತೆಗೆ ಯುದ್ಧ ಮಾಡಲು ಅರ್ಜುನನು ಹೋದುದನ್ನರಿತು, ದ್ರೋಣಾಚಾರ್ಯರು ಚಕ್ರವ್ಯೂಹವನ್ನು ರಚಿಸಿದರು. ಅದನ್ನು ಹೊಕ್ಕು ಮುರಿಯುವ ಕೆಲಸವು ಅನ್ಯರಿಗೆ ಅಸಾಧ್ಯವೆಂದು ತಿಳಿದು ಧರ್ಮರಾಜನು ಚಿಂತೆಯಲ್ಲಿರಲು, ಅಭಿಮನ್ಯುವು ತನಗೆ ಅಪ್ಪಣೆ ಕೊಡಿರೆಂದು ಕೇಳಿಕೊಂಡನು. ಈ ಭಾಗವನ್ನು ಕುಮಾರ ವ್ಯಾಸ ಕವಿಯ ಕರ್ನಾಟಕ ಮಹಾಭರತ ದ್ರೋಣಪರ್ವ, ಸಂಧಿ ನಾಲ್ಕರಿಂದ ತೆಗೆದುಕೊಂಡಿದೆ.

## ಟಿಪ್ಪಣಿ

ಅಣಲ = ಬಾಯಿ ; ಲೆಪ್ಪ = ಚಿತ್ರ; ಉರಬು = ಮುತ್ತು
ವರ್ಮ = ತುದಿ; ಆಯುಗ = ಹಿಡಿಕೆ; ಮುಗುಚು = ಸಾಣೆಹಿಡಿ;
ಬೂಳವಿಸು = ಜೋರಾಗಿ ಸಪ್ಪಳಮಾಡು.

## ಅಭ್ಯಾಸ.—

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—

(೧) ಪದ್ಮವ್ಯೂಹದ ಒಡ್ಡಣೆಯ ಕುರಿತುಧರ್ಮರಾಜನ ಅಭಿಪ್ರಾಯ ವೇನು?

(೨) ಅಭಿಮನ್ಯುವಿನ ಪರಾಕ್ರಮವನ್ನು ಕವಿಯು ಹೇಗೆ ವರ್ಣಿಸಿದ್ದಾನೆ?

(೩)ಅಭಿಮನ್ಯುವಿನ ತೇರನ್ನು ವರ್ಣಿಸಿರಿ.

(೪) "ಪಾಪಿಗಳೆಳ ಮಗನ ನೂಕಿದರು ಕಾಳಗಕೆಂದುದಮರಗಣ" ಈ ಮಾತನ್ನು ಕವಿಯು ಹೇಗೆ ಸಮರ್ಥಿಸುತ್ತಾನೆ ?

(೫) ಅಭಿಮನ್ಯುವಿನ ಯಾವ ಗುಣಗಳು ಇಲ್ಲಿ ಕಂಡುಬರುತ್ತವೆ?

(೬) ಧರ್ಮರಾಜ ಮತ್ತು ಅಭಿಮನ್ಯು ಇವರ ಮಾತನ್ನು ಕವಿಯ ಪದಗಳನ್ನು ಉಪಯೋಗಿಸಿ ಸಂಭಾಷಣೆಯ ರೂಪದಲ್ಲಿ ಬರೆಯಿರಿ.

(೭) ಕೃಪ, ಗುರುನಂದನ, ರಾಧೇಯ ಕೊಡನಮಗ, ಜಯ; ದ್ರುಪ, ಭೂರಿಶ್ರವ ಇವರು ಯಾರು ?

(ಅ) ಸ್ಪಷ್ಟೀಕರಿಸಿರಿ:—

(೧) ಮರೀಚಿಯ ತೊರೆಗೆ ಹರುಗೋಲಿಡುವರುಂಟೆ ?

(೨) ವಹ್ನಿಜ್ವಾಲೆ ಹಿಮಕಂಜುವುದೇ ?

(೩) ಸಂಪಿಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ?

(ಅ) " ಕೃತಾಂತನ ಮನೆಗೆ ಕಳುಹು " ಇದೇಅರ್ಥದ ಬೇರೆ ವಾಕ್ಯಗಳನ್ನು ಹೇಳಿರಿ.

(ಇ) ತಲೆದೂಗು, ತಲೆತುರಿಸು, ತಲೆಕಾಯು, ಮೈತೆಗೆ, ಮೈಗರೆ, ಮೈತೋರು, ಹಿಂದುಮುಂದೆನಿಸು ಈ ಪಡೆನುಡಿಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.

(ಈ) ಕೆಳಗಿನ ಕೂಡು-ನುಡಿಗಳನ್ನು ಬಿಡಿಸಿ ಅವುಗಳ ಹೆಸರುಗಳನ್ನು ಹೇಳಿರಿ.

ದಳಪ್ತರಿ, ಹೊಂದೊಡರು, ಹೆಗ್ಗಹಳೆ, ಮೈತೆಗೆ

(ಉ) ಚಿಕ್ಕ ನಿಬಂಧವನ್ನು ಬರೆಯಿರಿ.

(೧) "ವಯಂ ವಿಕ್ರಮಕ್ಕೆ ಕಾರಣಮಲ್ತು" (೨) " ನೂರು ವರುಷ ಕುರಿಯಾಗಿ ಬಾಳುವದಕ್ಕಿಂತ ಮೂರು ವರುಷ ಹುಲಿಯಾಗಿ ಬಾಳುವದು ಲೇಸು. "



## ೫. ಶಸ್ತ್ರಪೂಜೆ.

ಅರೆಯುಮಳಿನ ಸಸ್ನಿಯಾಯ್ತಾಗ ಜಿನಬಿಷ್ಟ | ಶರಣೆಸುತನಸಿಂ-
ಶಸೆದ್ವಾ ||
ವರಮಂತ್ರಿಸೇವಕರೊಡಗೂಡಿ ಶಸ್ತ್ರಮಂ | ದಿರಕೆ ಬಂದನು
ಗಮಕದೊಳು ||೧||

ಬಲು ತೆರಪಿನ ಶಸ್ತ್ರಶಾಲೆಯೊಳೊರೆಯುಚ್ಚಿ | ದಲಗುಗಳೆಲ್ಲ
ಸಾಲಾಗಿ ||
ಬಲಿಪುಷ್ಪಗಂಧ ಮುಂತಾದ ಪೂಜೆಯೊಳು ವೆ | ಗ್ಗಳಿಸು
ತಿದ್ದುವು ವೀರರಸವಾ ||೨||

ರಕ್ತಚಂದನದಲ್ಲಿ ಸಾರಣೆ ಕಾರಣೆ | ರಕ್ತಚಂದ್ರಿಕೆಯು
ಮೋಗ್ಗಿಟ್ಟು ||
ರಕ್ತವರ್ಣದ ಪುಷ್ಪಮಾಲೆಯಿಂದಾ ಶಾಲೆ | ಯುಕ್ತಿಗೊಪ್ಪಿತು
ಸಂಜೆಯಾಯ್ತು ||೩||

ಪಂಚವರ್ಣದ ಕೊಳರಾಸಿ ಖಜ್ಜಾಯದ | ಕೆಂಚಕರಿಕೆಸಿಡು
ಗುಡ್ಡೆ ||
ಅಂಚಿನೊಳುರಿವ ತುಪ್ಪಗಳ ಹೆಜ್ಜೊಡರಿಂದ | ಸಂಚಿಸಿದ್ದುದು
ಶಸ್ತ್ರಪೂಜೆ ||೪||

ಹುಗ್ಗಿ ಕಿಚ್ಚಡಿಯೊರೆಯಪ್ಪ ಸೇವಗೆ ಹಿಂಡಿ । ಗುಗ್ಗರಿ ಸೊಸಲುಂಡ
ಲಿಗೆ ॥
ಬೊಗ್ಗಿಪ್ಪ ರೊಟ್ಟಿಯಿಡ್ಡಲಿಗೆ ದೋಸೆಯು ಸಬ್ಬ । ಲಗ್ಗೆ
ಯಾಹುತಿಯೊಪ್ಪಿತಲ್ಲಿ ॥೫॥

ಚಂದ ಚಂದನುರಿವ ಹೆಜ್ಜೋಡರು ಚೀರ್ಚಕಟ್ಟಿಲೆಂಬ । ತಾರಿಗೆಂಡ
ಗಳ ಹೋಮಕುಂಡಾ
ತರಿದೊಡೆದೊಟ್ಟಿವ ಕಬ್ಬು ತೆಂಗಾಯಿಂದ । ಮೆರೆವುತಿದ್ದುದು
ಖಡ್ಗಪೂಜೆ ॥೬॥

ಹೊಗೆಯೋಳ್ಪ ಧೂಪ ಹೊಂಗಿಡಿ ಗೆದರುವ ದೀಪ । ಬಗೆ ಬಗೆ
ವಣ್ಣದ ಪುಷ್ಪಾ ॥
ಚಿಗುರೆಲೆ ಕೆಂಗೂಳು ಪಣ್ಕಾಯು ಮೊದೆಯಿಂದ । ದಿಗುಬಲಿ
ಗೊಟ್ಟಿರ್ದುವಲ್ಲಿ ॥೭॥

ಅಂತಿಗೆರಸವಸ್ತ್ರ ಕಲಸುಗೊಳ್ಳಿಟ್ಟಿಗೂ । ಕೊಲಿದುರಿ ಸಿಮಿರ್ವ
ಧೂಪಘಟಾ ॥
ಮಿಳಿಮಿಳಿಸುವ ಸಾಲುಗೈದಿಂದ ರಕ್ಕಸ । ಪೊಳಲಂತೆ ಮೆರೆ
ದುದಾ ಸದನಾ ॥೮॥

ಭಲ್ಲೆಯ ಕತ್ತಿ ಕಠಾರಿ ಮುಷ್ಟಿಡಿ ವಂಕಿ । ಸಲ್ಲೆಹ ಗದೆ ಲಾಡಿ
ಸಬಳ ॥
ಬಿಲ್ಲಂಬು ಜನನಾಡೆ ಕಿರಿಸೆಗಳಂ ಗೃಹ । ವಲ್ಲಿದ್ದವುರಿಮಾರಿ
ಯಂತೆ ॥೯॥

ಖಂಡೆಯ ಪಟಲಿಟ್ಟ ಗದೆ ಚಂದ್ರಹಾಸವಿ । ಚಂಡಿ ಮೊಗ್ಗರಣೆ
ಕೃಪಾಣಾ ॥
ದಂಡರತ್ನಾಯುಧಾವಳಿಗಳಿದ್ದುವು ಸರ್ವ । ಮಂಡಲವೆನೆ
ಭುಗಿಲಿಡುತ ॥೧೦॥

ಸುರಗಿ ಕಠಾರಿ ಚೂರಿ ಕಡಿತಲೆ ಪಟ್ಟಿಸ | ಪರಶು ಕೊಡಲಿ ಶಕ್ತಿ
ಡಾಣೆ ||
ಬಿರುಸುರಿ ಕಕ್ಕಡೆ ಚುಂಚುಲಿ ಬಸಿಹಾಸ | ಉರಿಯನುಗುಳು
ತಿರ್ದುವಲ್ಲಿ ||೧೧||

ಎಂದಿಗೀ ಪೋರಿ ಬಂಡು ನಡೆವನೊ ರಿಪುಗಳ | ತಿಂದು ತೇಗುವೆ
ನೆಂದು ಮೃತ್ಯು||
ಇಂದೆ ನಾಲಗೆ ನೀಡಿದಂತಿರ್ದುದಲ್ಲಿ ಸಾ | ನಂದಕವೆಂಬಸಿ
ರತ್ನಾ ||೧೧||

ಕಾಲನ ದಾಡೆಗಳಂತೆ ಕರಾಳ ಖ | ಡ್ಗಾಳಿಗಳಿರೆ ಮತ್ತೆ ನಡುವೆ ||
ಜ್ವಾಲಾರ್ಕನಂತೆಸೆದುದು ಚಕ್ರರತ್ನ ಭೂ| ಪಾಲ ನೊಡಿದ
ನದನಿಂದು ||೧೩||
ಚಕ್ರಿ ಚಿಹ್ನಹಸಿಂಪು ಮುಟ್ಟೆ ಸಂಭ್ರಮದಲ್ಲಿ | ಚಕ್ರರತ್ನದ
ಪೂಜೆಯಾಯ್ತು

ವಿಕ್ರಾಂತ ಲಗ್ನದೊಳಗೆ ನಾಳೆ ಪಯಣ ಯ | ಥಾ ಕ್ರಮ
ವೆಂದನಾ ಮಂತ್ರಿ ||೧೪||

ಆ ನುಡಿಗೇಳುತ ನೃಪತಿ ಚಕ್ರದ ಮೇಲೆ | ತಾನೊಂದು ಕಮ
ಲವನಿಟ್ಟಾ ||
ಭಾನುವಿಗಬ್ಜ ಸಾದುರ್ದು ದೇವ ನಿನಗಿದು | ತಾನೆ ಲೇಸಿಹ
ಚಿಹ್ನವೆಂದಾ ||೧೫||

ಧಾತ್ರೀಶನಲ್ಲಿಂದ ಮುಗುಳ್ದನಾ ಮಂತ್ರಿಯು | ನೇತ್ರಲೀಲೆ
ಯೊಳು ಬೀಳ್ಕೊಟ್ಟಾ ||
ಸೂತ್ರಿಸಿ ತನ್ನರಮನೆನ್ವೇಕ್ಷಿಸಿದು ನವ | ರಾತ್ರಿಯ ಸಂಧಿ
ಸುಗಂಧಿ ||೧೬||

— ರತ್ನಾಕರವರ್ಣಿ.

# ಪರಿಚಯ

"ಶಸ್ತ್ರಪೂಜೆ'' ಇದನ್ನು ಭರತೇಶ ವೈಭವದ 'ನವರಾತ್ರಿ' ಸಂಧಿಯಿಂದ ಆಯ್ದುಕೊಂಡಿದೆ. ಭರತೇಶ ವೈಭವದ ಕರ್ತನು ರತ್ನಾಕರವರ್ಣಿ. ಈತನು ಬಾಲ್ಯದಲ್ಲಿಯೇ ಕಾವ್ಯಾಲಂಕಾರ-ಲಕ್ಷಣಶಾಸ್ತ್ರದಲ್ಲಿ ಅತಿ ನಿಪುಣನಾಗಿದ್ದನು. ಈತನಿಗೆ 'ಶೃಂಗಾರಕವಿಹಂಸರಾಜ'ನೆಂದು ಬಿರುದಿದ್ದಿತೆಂದು ಕೆಲವರು ಅಭಿಪ್ರಾಯ ಪಡುವರು. ಈತನು ಅಪರಾಜಿತೇಶ್ವರ ಶತಕ, ರತ್ನಾಕರಾಧೀಶ್ವರ ಶತಕ, ತ್ರಿಲೋಕ ಶತಕಗಳನ್ನು ಬರೆದಿದ್ದಾನೆ.

ಭರತೇಶ ವೈಭವವು ಮೃದುಮಧುರವಾದ ಪದರಚನೆಯಿಂದಲೂ, ಕಥಾಕೌತುಕದಿಂದಲೂ, ವರ್ಣನಾಚಮತ್ಕಾರದಿಂದಲೂ ಮೊದಲಿನಿಂದ ಕೊನೆಯವರೆಗೆ ಓದುಗರಿಗೆ ಆನಂದಕೊಡುತ್ತದೆ. ಇದರಲ್ಲಿ ಮಾಧುರ್ಯ, ಸೌಕುಮಾರ್ಯ, ಕಾಂತಿ ಮೊದಲಾದ ಕಾವ್ಯಗುಣಗಳನ್ನೂ, ಮಾತಿನ ಇಂಪೂ, ನುಡಿಯ ಬೆಡಗೂ, ಒಳ್ಳೆಯ ಕಥಾಸರಣಿ, ಬಣ್ಣನೆಯ ಬಿನ್ನಾಣ, ಬಗೆ ತೀರುವಷ್ಟು ನವರಸ ಪುಷ್ಟಿಯನ್ನೂ ಕಾಣ ಬಹುದು.

ಇಡೀ ಗ್ರಂಥವು ಸಾಂಗತ್ಯದಲ್ಲಿದೆ. ಈ ಕವಿಯ ಕಾಲ ಕ್ರಿ. ಶ.೧೫೫೭.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಭರತೇಶನ ಶಸ್ತ್ರಾಗಾರವನ್ನು ಪೂಜೆಗಾಗಿ ಹೇಗೆ ಶೃಂಗರಿಸಿದ್ದರು ?

(೨) ಶಸ್ತ್ರಾಗಾರದಲ್ಲಿದ್ದ ಶಸ್ತ್ರಗಳು ಯಾವವು? ಅವು ಹೇಗೆ ಒಪ್ಪುತ್ತಿದ್ದವು? ಇಂದು ಅವುಗಳಲ್ಲಿ ಯಾವ ಶಸ್ತ್ರಗಳು ಬಳಕೆಯಲ್ಲಿವೆ?

(೩) ಸಾನಂದಕನೆಂಬ ಅಸಿರತ್ನ ಮತ್ತು ಚಕ್ರರತ್ನವು ಹೇಗೆ ಕಂಡವು?

(೪) ನವರಾತ್ರಿಯಲ್ಲಿ ಶಸ್ತ್ರ ಪೂಜೆಯನ್ನು ಎಂದು ಮಾಡುತ್ತಾರೆ? ಏಕೆ?

ಸಮಾಸ ಬಿಡಿಸಿರಿ.

ಹೆಜ್ಜೊಡರು, ಕೆಂಚಕರಿಕೆ, ಸಿಡುಗುಡ್ಡೆ, ಹೊಂಗಿಡಿ, ಕೆಂಗೂಳು,

ಜವದಾಡೆ.

ನಿಬಂಧ ಬರೆಯಿರಿ.

ನವರಾತ್ರಿಯ ಉತ್ಸವ, ಇಂದಿನ ನಾಡಹಬ್ಬ.



# ೬ ಎಕ್ಕಲನ ವರ್ಣನೆ

**ಚಂ॥**

ಅತಿಬಳ ಮೂಕದಾನವನೆನಪ್ಪಪಸೋರ್ವ ಸಮುಪ್ಪ ಗರ್ವಸಂ।
ಯುತನವನೀಧರೇಂದ್ರದನಿತಂಬದಿದುಂಬಿನೊಳಿರ್ದ ನಿರ್ಜರ ॥
ಪ್ರತತಿಯ ಪರ್ಬಿದಬ್ಬರಮನಾಲಿಸಿ ತಿಂದಪನೀಸು ಪರ್ವಸಂ।
ತತಿಯನೆನುತ್ತೆ ತಾಳ್ದು ಪೊರಮಟ್ಟುಸುದಗ್ರ ವರಾಹರೂಪಮಂ॥೧॥

**ಚಂ॥**

ಇದು ಶಿರದಲ್ಲಿ ಕೋಡೊಗೆಯದಂತಕ ಸೈರಿಭನೋ, ಬಳಿ
ಕ್ಕಮಿಂ ॥
ತಿದು ಬರಿಕೈಯದಾನನದ ಮಹಾಗಜದಾನವನೋ, ವಿಚಾ
ರಿಪಂ ॥
ದಿದು ನಡೆಗಲ್ಲು ಸಂಚರಿಪ ಮೇಚಕ ಶೈಲವೊ, ಸಾರ್ದು
ನೋಳ್ಪೊಡಿಂ।
ತಿದು ಪೃಥುಕಾಯ ಸೂಕರನೊ, ಪೇಳೆನೆ ತೋರಿದುದಾ
ವರಾಹಕಂ ॥೨॥

**ವ॥**

ಬಡಬ ಜ್ವಾಲೆಯ ವಿಸ್ಫುಲಿಂಗತತಿಯೆಂಬಂತಿರ್ಪ ಕಣ್ಚಕ್ರದಿ।
ಕಿಡಿಯಂ ಬಾಯೊಳಿರುಂಕಿದಂತೆ ಪೊಳಪಿಂ ಕೊಂಕಿರ್ದ
ಕೂರ್ದಾಡೆ, ಬ ॥

ಲ್ಸಿಡಿಲುದ್ಯದ್ರುಪ ಮಾಳ್ಪ ಭೀಕರ ಮುಖಂ ಕಲ್ಪಾಬ್ದಮಂ
ಪೋಲ್ವ ಕಾ ।
ರೊಡಲತ್ಯದ್ಭುತಮಾಗೆ ಬಂದುದು ಮಹಾರೋಷಾಕರಂ
ಸೂಕರಂ ॥೩॥

ಚಂ॥

ಖರ ಖುರಘಾತದಿಂದೆ ಪುಡಿಯೇಳೆ ಶಿಲಾತಲಮೊತ್ತಿ ಮೆಟ್ಟೆ ಮೈ ।
ಯೊರಸೆ, ಬೃಹತ್ಕುಜ ಪ್ರತತಿ ನುರ್ಗೆ, ವಿಜೃಂಭಣಮಾಳ್ದು
ಗರ್ಜಿಸು ॥
ತ್ತುರುತರ ಪರ್ವತ ಪ್ರತಿಮಮಾಗುವಡೆ, ಬೇರ್ಚಿಸಿ ತನ್ನಗೇಂದ್ರ
ಕಂ ।
ಥರ ಮೃಗರಾಜಯಂಜನದಿನೇಳ್ತರುತಿರ್ದುದು ಸೊಕ್ಕಿದೆ
ಕ್ಕಲಂ ॥೪॥

ವ॥ ಆ ಕಟಕದೊಳಿಂತು ಬರ್ಪ ಕಿಟಿಯುಂ ಕಳ್ಕನೆ ಕಂಡು ॥೧॥

ಚಂ॥

ಎಲೆಯುಲೆ ಪಂದಿ ಪಂದಿ ಮಿಗೆ ಬಂದುದು ಬಂದುದು, ಭಿಲ್ಲರೆ
ಲ್ಲರಂ ।
ಬಲಿಗೊಳಲೆಂದು ಮೃತ್ಯು ಕಿಟಿರೂಪಮನಾಂತು ಪೊಲೊತ್ತು
ಪತ್ತು ನಿ ॥
ಲ್ತೊಲಗದಿರಟ್ಟು ಕುಟ್ಟು ತಿವಿ ಕೊಲ್ತರಿ ಗೊಣ್ಸರಿ ಕುತ್ತು
ಶೀಳ್ಪಳಂ ।
ಚಲಸವೆ ಪೊಯ್ಕುರುತ್ತಿರಿಯೆನಿಪ್ಪ ರವಂ ಪಿರಿದಾಯ್ತು ಬೇಡ
ರೋಳ್ ॥೫॥

ವ॥ ಎಂದು ಸಂರಂಭದಿಂ ಪುಟ್ಟಿ ಮೂದಲಿಸುತೊಟ್ಟಜೆಯಂ ತೊಟ್ಟಸಿಟ್ಟಿಗಳಂ ತಾಳ್ದು ಕಟ್ಟು ಬಟ್ಟಿಯಂ ಕನಿಪ ದಟ್ಟಜಿಯುಮ ಪರ್ಜದಬ್ಬರಮನಾಲಿಸಿ ಕನಲ್ಕೆ ಮಿಗೆ ದಾಡೆಯಂ ಮಸಪಂಡುಗೊಂಡು ತೃಣಮಂ ತುಂಡಿಸಿ ಬಾಲಂ ನಿಮಿರೆ ಕಾಲಿಂ ತೂಗಿ ಪಟುತರ ಶೌರ್ಯದಿಂ ಪುಳಿಂದ ನಿಳಿಂಪರ್ಗಭಿಮುಖವಾಗಿ ನಿಂದು ॥೫॥

ಚಂ॥ ಪಡುಗೆ ಧರಿತ್ರಿ, ಎಕ್ಕರಿಗಳಳ್ಕೆ, ಭಯಂಗೊಳೆ ಸತ್ತ್ವಸಂಕುಳಂ, ।
ಪಡಲಿಡೆ ಶೈಲಶೃಂಗ ತತಿ, ತುಳ್ಕೆ ಮಹಾಬ್ಧಿ ಕರಾಳ ಘೋಷದಿಂ ॥
ಘುಡಿಘುಡಿಸುತ್ತೆ ದಾಡೆಗಡಿದುರ್ಜೆ ಕಡಂಗುತೆ ಕಾಯ್ಪು ನೆತ್ತು ಕ ।
ಣ್ಗಿಡೆ ಕಿಡಿಸೂಸೆ, ನೋಡಿದುದು ನಿಂದು ಪುಳಿಂದರನುಗ್ರ ಸೂಕರಂ ॥೬॥

ಚಂ॥ ಪೊಗೆ ಪೊರಸೂಸೆ, ಘೂರ್ಮಿಸುವ ಮೂಗಿನೊಳೀಕ್ಷಿಪ ಲೋಹಿತಾಕ್ಷಿಯಿಂ ।
ಭುಗಿಲೆನೆ ಪೊಣ್ಮೆ ದಳ್ಳುರಿ, ಕರಂ ಮಸೆದಗ್ಗದ ದಾಡೆಯುಗ್ರದಿಂ ॥
ಉಗುತಿರೆ ತೀರದ ಕೆಂಗಿಡಗಳುಗ್ರತೆಯಂ ತಳೆದುರ್ಕೆ ಸೊಕ್ಕಿನಿಂ ॥
ದಗಲ್ದೆ ನುಂಗತಾವಳಿಸಿದತ್ತು ವರಾಹಕನಾ ಕಿರಾತರಂ ॥೭॥

ಚ॥ ಕುಸಿದ ಶಿರಂ, ಕೆಲಕ್ಕೊರಲೆದ ಬಲ್ಕು, ಪುಡುರ್ಬಿದ ಮೈಯರೋಮ, ಮೂ ।
ರ್ಜಸೆವ ಮನಂ, ಮರಲ್ದ ಕಿವಿ, ನಿಳ್ಕಿರಿದಾಡುವ ಬಾಲಮುರ್ವಿಪೊ ॥

ಯ್ಯುವ್ವ ಸುರೊಡನೇೞ್ದು ಪೆಸ್ಸರಿದ ಗೋಣ್ಮುಡಿ ಪಾಱಪಱಪೆ
ತಳ್ತಗು |
ಪಿಸಿ ಮುೞಿದುರ್ಕಿ ಗರ್ಜಿಸಿ ಕರಂ ಪರಿತಂದುದು ಪಾಪಿ
ಕಾಯ್ಪಿನಿಂ ||೮||

ಚಂ|| ಬೊಣವನಱಿಚ್ಚು ಕೂರ್ಗಣೆಗಳಂ, ನಿಗೆ ಮುತ್ತಿದ
ಜಾಯಿಲಂಗಳಂ |
ಕ್ಷಣದೊಳೆ ದಿರ್ಚಿ ತುಂಡಿಸಿ ಕರುತ್ತಿರಿಪಿಟ್ಟಿಯನಂಡಗೊಂಡು
ಬಿಂ |
ಸಣಿವ ಬದಿರ್ಚಿ, ಸಿಪ್ಪುರದೆ ಪೇರ್ಬಲೆಯುಂ ಪರಿದಿಕ್ಕಿ, ಕೇಣದಿಂ |
ಕೆಣಕಿದ ಧೀವರಾವುರರ ನೆಕ್ಕಲಿಸುಬ್ಬತೆ ಸೀೞ್ದು ದಾ
ಪಿಸಿಂ ||೯||

ವ|| ಮತ್ತಂ,

ಚಂ|| ನೆರೆದಿದಿರಾದೊಡಟ್ಟುವ, ಪೊದಳ್ದುರಿಯುಟ್ಟಿದೊ
ಡಂಡುಗೊಳ್ಳ, ಪಾ|
ಯ್ದುರೆ ಮುನಿದೆತ್ತಿ ಗರ್ಜಿಪ, ಕೆಲಂದೊಡಗುತ್ತಿರೆ ದಾಡೆ
ಗುಟ್ಟಿಸಿ ||
ಘರ್ಜದೆ ಪಲಂಚಲಿಮ್ಮಳಿಪ, ಜೊಬ್ಬರವೃತ್ತಿರ ವ್ಯೈಯರ್ಥೋ
ಮಮುಃ |
ಬ್ಬರಿಸಿ, ಕಡಂಗಿಸಿಲ್ಕಿ, ಬಗೆಪೊಕ್ಕಳಪೂದುದು ಸೂಕ
ರೇಂದ್ರನ ||೧೦||

ಚಂ|| ಮಿಱಿವ ಪೂಳ್ವೆರೊಪ್ಪುವ ಮಲಂಗುವ ಪೊಂಗುವ
ತಳ್ತು ಪಾಯ್ವ ಕೆಂ |
ಗಲಿಪ ಕಟಾಕ್ಷದಿಂದಡರಿ ನೋಡುವ ಕಾಡುವ ದಾಡೆಗುಟ್ಟುವ ||

ಗಲಿಸಿ ತೊಡಂಕುವಬ್ಬರಿಸಿ ಪತ್ತುವ ಸುತ್ತುವ ಘೂರ್ಮಿಸುತ್ತೆ ಸಂ।
ಚಲಿಪ ಧರಿತ್ರಿಯಂ ಟೊಣೆಪ ಸೂಕರನಾಟವದೇನ
ಳುಂಬವೋ ॥೧೧॥

ಕಂ॥ ತಿರುಗುತ್ತೊಂವೆರಡಡಿಯಂ।
ಭರದಿಂವೋಡುತ್ತೆ ಸಿಲುತೆ ಘೂರ್ಮಿಸುತಂ ಕೊ॥
ಕ್ಕರಿಸುತಿದಿರಾಂತು ವಿಸಟಂ।
ಬರಿಮುಮ ಸುರರಿದಿರೊಳರರೆ ಘೋರ ವರಾಹಂ ॥೧೨॥

—ಷಡಕ್ಷರದೇವ



# ಪರಿಚಯ

ಈ ಪದ್ಯಗಳು“ ಶಬರಶಂಕರ ವಿಲಾಸ”ವೆಂಬ ಗ್ರಂಥದಿಂದ ಉದ್ಧೃತವಾಗಿವೆ. ಇದನ್ನು ಬರೆದ ಕವಿ ಷಡಕ್ಷರದೇವನು. ಈತನು ಯಳಂದೂರದಲ್ಲಿ ಹುಟ್ಟಿ ದನುಗೂರಿನ ಚಿಕ್ಕವೀರದೇಶಿಕನೆಂಬ ಶಿವಾಚಾರದ ಗುರುವಿಗೆ ಶಿಷ್ಯನಾಗಿ ವಿದ್ಯಾಭ್ಯಾಸ ಮಾಡಿದನು. ಬೀದರಪಲ್ಲಿದ್ದ ವಿರಕ್ತ-ಮಠಕ್ಕೆ ಅಧ್ಯಕ್ಷನಾಗಿ ಶೈವರಾಜನ ಪೋಷಣೆಯಲ್ಲಿ ಹಲವು ಗ್ರಂಥಗಳನ್ನು ಬರೆದನು. ಈತನು ‘ಉಭಯಕವಿತಾ ವಿಶಾರದನು’ “ಕವಿಕರ್ಣರಸಾಯನ, ಶಿವಾಧಿಕ್ಯ, ಭಕ್ತಾಧಿಕ್ಯ ” ಎಂಬ ಗ್ರಂಥಗಳನ್ನು ಸಂಸ್ಕೃತದಲ್ಲಿಯೂ, “ರಾಜಶೇಖರವಿಳಾಸ, ವೃಷಭೇಂದ್ರವಿಜಯ, ಶಬರಶಂಕರವಿಲಾಸ ವೀರಭದ್ರ ದಂಡಕ ”ವೆಂಬ ಗ್ರಂಥಗಳನ್ನು ಕನ್ನಡದಲ್ಲಿಯೂ ಬರೆದಿದ್ದಾನೆ.

ಈತನು ೧೭ನೆಯ ಶತಮಾನದ ಆದಿಭಾಗದಲ್ಲಿದ್ದನೆಂದು ಈತನೇ ಬರೆದ ರಾಜಶೇಖರವಿಳಾಸದಿಂದ ಗೊತ್ತಾಗುತ್ತದೆ. ಈತನ ಕಾವ್ಯಗಳಲ್ಲಿ ಸಂಸ್ಕೃತ ಶಬ್ದಗಳು ಹೇರಳವಾಗಿದ್ದರೂ, ಅನೇಕ ಭಾಗವು ಕನ್ನಡದಿಂದ ತುಂಬಿದೆ. ಈ ಕವಿಯ ಕಲ್ಪನಾಶಕ್ತಿ ಮತ್ತು ವರ್ಣನೆಯ ರೀತಿ ಅದ್ಭುತವಿದೆ.

## ಸಂದರ್ಭ.

ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯಲು ಅರ್ಜುನನು ತಪಸ್ಸು ಮಾಡಲು ಇಂದ್ರಕೀಲಪರ್ವತಕ್ಕೆ ಹೋದನು. ಅವನ ಘೋರ ತಪಶ್ಚರ್ಯವನ್ನು ಪರೀಕ್ಷಿಸಲು ಶಿವನು ತನ್ನ ಶಕ್ತಿಯಿಂದ ಕಿಟಿಯೊಂದನ್ನು ತನ್ನ ಬೇಟೆಗಾಗಿ ನಿರ್ಮಿಸಿದನು. ಅದರ ವರ್ಣನೆಯು, ಇಲ್ಲಿದೆ.

## ಕಠಿಣ ಶಬ್ದಾರ್ಥ.

ಅಖರ್ವ =ಹೆಚ್ಚಾದ; ನಿತಂಬ= ತಪ್ಪಲು; ಸುಪರ್ವ= ದೇವತೆ ಆನದ= ಧರಿಸಿದ; ಮೇಚಕ= ಕಪ್ಪಾದ; ಇರ್ಕಡಿಯಂ =ಎರಡು ತುಂಡನ್ನು ; ಖರ= ತೀಕ್ಷ್ಣವಾದ; ಕಳ್ಕಗೆ= ಬೇಗನೆ ; ಪತ್ತು= ಮೇಲೆಯೇರು; ತರಿ =ಹರಿಯುವಂತೆ ಕೊಯ್ಯು; ಕರುತ್ತು =ಸಿಟ್ಟೆ

ಸಿಂದ ಗುರಿಯಿಟ್ಟು; ಕಡಂಗುತೆ= ತವಕಪಡುತ್ತ; ಅಗ್ಗದ= ಸಮರ್ಥ ವಾದ ; ಮರಲ್ದ= ಹಿಂದಕ್ಕೆ ಬಾಗಿದ; ಕಾಯ್ಪು= ಸಿಟ್ಟು ; ಇಟ್ಟಿ = ಕೋಲು; ಕೇಣ= ಶಕ್ತಿ, ಕೆಚ್ಚು; ಅಂದುಗೊಳ್= ಹೋಗದೆ ಕುಳಿತುಕೊ ; ರೊಪ್ಪುವ =ಬಡಿಯುವ ; ತೊಡಂಕು= ತೊಂದರೆ ಗೊಳಿಸು.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಕಿಟಿಯು ಭಿಲ್ಲರಿಗೆ ಹೇಗೆ ಕಂಡಿತು ?

(೨) ಎಕ್ಕಲದ ಘೋಷವು ಹೇಗೆ ವರ್ಣಿಸಲ್ಪಟ್ಟಿದೆ ?

(೩) ಕಾಡಹಂದಿಯ ಕಾರ್ಯವನ್ನು ಕವಿಯು ಹೇಗೆ ವರ್ಣಿಸಿದ್ದಾನೆ?

(೪) ಕಾಡಹಂದಿಯ ಆಟವನ್ನು ಹೇಳಿರಿ.

(೫) ಕಾಡಹಂದಿಯ ಭೀಕರತೆಯನ್ನು ಚಿತ್ರಿಸಲು ಕವಿಯು ಬಳಸಿದ ಶಬ್ದಗಳು ಯಾವವು ?

(೬) ಹರಿಶ್ಚಂದ್ರ ಕಾವ್ಯದಲ್ಲಿ ಬಂದ ಕಾಡಹಂದಿಯ ವರ್ಣನೆಯನ್ನೂ ವಿಕ್ರಮಾರ್ಜುನ ವಿಜಯ ಆಶ್ವಾಸ ೮ ಮತ್ತು ಚನ್ನಬಸವ ಪುರಾಣ ಕಾಂಡ ೪ ಸಂಧಿ ೧೩ ಇವುಗಳಲ್ಲಿ ಬರುವ ವರ್ಣನೆಯನ್ನೂ ಇದಕ್ಕೆ ಹೋಲಿಸಿರಿ.

(೧) ತತ್ಸಮ ತದ್ಭವ ಕೊಡಿರಿ:—

ದಾಡೆ, ಮೃತ್ಯು, ಅಬ್ಧಿ, ಅಗ್ಗ, ಇಟ್ಟಿ.

(೨) ಕೆಳಗಿನ ಕೂಡುನುಡಿಗಳನ್ನು ಬಿಡಿಸಿ, ಹೆಸರು ಹೇಳಿರಿ:—

ಬಾಂಬ್ಬಿಟ್ಟು, ಕಟ್ಬೊಬಿಲು, ಕೂರ್ಗಣೆ, ಬಲ್ಮಸುಡ, ಇರ್ಕಡಿ.

(೩) ವ್ಯಾಕರಣ ವಿಶೇಷವೇನು ?

ಪಂದಿ ಪಂದಿ, ಬಂದುದು ಬಂದುದು.

(೪) ೨, ೩ ನುಡಿಗಳಿಗೆ ಪ್ರಸ್ತಾರಹಾಕಿ ವೃತ್ತ ಯಾವುದು ಹೇಳಿರಿ.

## ೭ ಕೊಳಲಗಾನ

ರಂಗ ಕೊಳಸೂದಲಾಗಿ, ರಂಗಯ್ಯ ಕೊಳಲ
ಸೂದಲು ‖ ಪ ‖

ಮಂಗಲಮಯವಾದಿತು ಧರೆ ಜ-
ನಂಗಳು ಜೀವನ ಚೇತನ ಮರೆದು
ರಂಗ ಧ್ಯಾನ ಪರರಾದರು ‖ಅ. ಪ ‖

ಬಾಡಿದ ಬಳ್ಳಿ ಮರಾ ಗೊನೆಯೊಡೆದವು
ತೀಡುವ ಮಂದ ಮಾರುತನ ಕೂಡ ತೂ
ಗ್ಯಾಡುವ ವನದ ಫಲದ ಗೊಂಚಲನಿ
ಪಾಡಲೊಲ್ಲವಳಿ ಕುಲಗಳು ‖

ಹೇಡಿಗೊಂಡವು ಜಾಣ್ವಕ್ಕಿ ಗಿಳಿಯು ಮಾ-
ತಾಡದೆ ಕಳೆಗುಂದಿದವು ಕೋಕಿಲ
ಓಡ್ಯಾಟ ವೈರಾಟ ಜರೆದು ಖಗಮೃಗ
ಗಾಢನಿದ್ರೆ ವಶವಾದವು ‖೧‖

ಕೆಚ್ಚಲು ಬಿಗಿದ ತೊರೆದ ಮೊಲೆಯು
ವತ್ಸವಗಲಿಸಿ ಅರೆದೆಳೆ ಹುಲ್ಲು
ಕಚ್ಚಿ ಅಲ್ಲಿ ಅಲ್ಲಿಗೆ ನಿಂತವು ತಲೆಯ
ಪುಚ್ಛವ ನೆಗಹಿ ನೀಂಟಿಸಿ ‖

ಅಚ್ಯುತನ ಕೃತಿ ನೋಡಲು ಸುರರಿ
ಗಚ್ಚರಿವಾಯಿತು ಆವು ಕಂಡಾನಂದ
ಮೆಚ್ಚಿ ಮುಕುಂದನ ಲೀಲಾ ವಿನೋದಕೆ
ಅಚ್ಚ ಕುಸುಮವ ಸುರಿದರು ||೨||

ತೆಳಗಿನೋದಕ ಉಕ್ಕೇರಿ ಬಂದವು
ತುಳುಕಿ ಚಲ್ಲಾಡಿ ನಿಂತಳು ಯಮುನೆ
ಮೇಲೆ ಮೋಡೊಡ್ಡಿ ಮೇಘಾಳಿ ಭೋರಿಟ್ಟವು
ಕಲ್ಲು ಕರಗಿ ನೀರಾದವು ||

ನಳಿನ ಚಂಪಕ ನಾಗ ಪನ್ನಗ ಪಾ-
ಟಲ ಶಾವತಿಗೆ ಕುಂದ ಬಕುಲವು
ಮಾಲತಿ ಜಾಜಿಯು ಪರಿಮಳಂ ಗೂಡಿ
ನೀಲಾಂಗನಂಘ್ರಿಗೆ ಎರಗಿದವು ||೩||

ಮುದ್ದು ಮೋಹನ್ನನ್ನ ಮಂಜುಳ ಸಂಗೀತ
ಸದ್ದ ನಾಲಿಸಿ ಗೋಪಾಂಗನೇರೆಲ್ಲರು
ಬದ್ಧಿ ಸೂರಾಡಿದರಂಗಜ ಶರಕೆ
ಬಿದ್ದು ಪರವಶರಾದರು ||

ಸಿದ್ಧ ಮುನಿಜನರಿದ್ದ ಸಮಾಧಿಯೋ-
ಳಿದ್ದೆದ್ದು ಕುಣಿದು ಎದೇ ತಾವರೆ
ಗದ್ದುಗೆಯ ರಸನೊಲಿಸಿಕೊಂಡರು
ಗೆದ್ದರು ಭವ ಸಮುದ್ರವ ||೪||

ಶ್ರೀಮನೋಹರ ಮೂರುತಿ ಗೋಪಾಲನು
ಆ ಮಧು ಮಧುಕುಂಜವನಾದಿ ತ್ರಿಭಂಗಿಸಿ

ಹೇಮಾಂಬರುಟ್ಟು ಗೀರ್ಗಂಧ ಕಸ್ತೂರಿಯು
ನಾಮ ಕುಂಡಲದ ಬೆಳಕಿನಲ್ಲಿ ||

ದಾಮ ವನಮಾಲಿ ರತ್ನಾಭರಣದ
ಸ್ವಾಮಿ ಶ್ರೀ ಪ್ರಸನ್ನ ವೆಂಕಟ ಕೃಷ್ಣನ
ನಾಮಕ್ರಿ ಗುಂಡಕ್ರಿ ಮೇಘರಾಗವ ಮಾಡಿ
ಸಾಮಗಾಯನದಿ ನಮೋ ಎಂದರು. ||೫||

—ಪ್ರಸನ್ನ ವೆಂಕಟದಾಸರು.



# ಪರಿಚಯ

ಇವರು ಘನವಿದ್ವಾಂಸರೂ, ಅಪರೋಕ್ಷ ಜ್ಞಾನಿಗಳೂ ಆಗಿದ್ದರು. ವಿಜಾಪುರ ಜಿಲ್ಲೆಯ ಬಾಗಿಲುಕೋಟೆಯೇ ಇವರ ಜನ್ಮಸ್ಥಳ. ಇವರ ಪೂರ್ವಜರು ಕಾಖಂಡಿಕಿಯಿಂದ ಬಂದು ಇಲ್ಲಿ ನೆಲಸಿದ್ದರೆಂದು ತಿಳಿಯುತ್ತದೆ. ಭಾದ್ರಪದ ಶುದ್ಧ ದ್ವಾದಶಿಯಿಂದ 'ರಾಯರ' ಪುಣ್ಯತಿಥಿಯು ಇಂದಿಗೂ ಆಚರಿಸಲ್ಪಡುತ್ತದೆ.

ದಾಸ ಸಾಹಿತ್ಯದಲ್ಲಿ ಪುರಂದರದಾಸ, ಕನಕದಾಸ, ಜಗನ್ನಾಥದಾಸ, ವಿಜಯದಾಸ, ಗೋಪಾಲದಾಸ-ಇವರ ತರುವಾಯ ಪ್ರಸನ್ನ-ವೆಂಕಟ ದಾಸರೇ ಸುವಿಖ್ಯಾತರು ಎಂದು ಹೇಳಬಹುದು. ಧಾರವಾಡ ವಿಜಾಪುರ ಜಿಲ್ಲೆಗಳಲ್ಲಿ ಇವರ ಹಾಡುಗಳು ಮನೆ ಮನೆಗೂ ಕೇಳ ಬರುತ್ತವೆ. ಇವರ ತಂಬೂರಿಯು ಇಂದಿಗೂ ಬಾಗಿಲುಕೋಟೆಯಲ್ಲಿದೆ.

ಈ ಸಂಗ್ರಹದಲ್ಲಿರುವ ಇವರ 'ಗೀತ'ವು, ಶ್ರೀಮಾನ್ ದಿವಾಕರ ರವರಿಂದ ಸಂಪಾದಿತವಾದ 'ಹರಿಭಕ್ತಿಸುಧೆ-ಯಿಂದ ಆಯ್ದುಕೊಂಡಿದೆ, ಶ್ರೀಕೃಷ್ಣನ ಕೊಳಲುಗಾನದಿಂದ ಜಡ ಚೇತನಗಳಲ್ಲಿ ಎಂತಹದೊಂದು ತನ್ಮಯತೆ ತುಂಬಿತು ಎಂಬುದನ್ನು ದಾಸರು ಸೊಗಸಾಗಿ ಚಿತ್ರಿಸಿದ್ದಾರೆ.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ರಂಗನು ಕೊಳಲನ್ನು ಊದಲು ಸೃಷ್ಟಿಯಲ್ಲಿ ಎಂಥ ಚಮತ್ಕಾರಳಾದವು ?

(೨) ಕೊಳಲ ಗಾನವನ್ನು ಕೇಳಿ ಗೋಪಾಂಗನೆಯರು ಮತ್ತು ಸಿದ್ಧರು ಏನು ಮಾಡಿದರು ?

(೩) ದಾಸರು ಕೃಷ್ಣನ ರೂಪವನ್ನು ಹೇಗೆ ವರ್ಣಿಸಿದ್ದಾರೆ ?

(೪) ಶ್ರೀಮತಿ ಸರೋಜಿನಿ ನಾಯಿಡು ಇವರ.

"Flute player of Brindavan" ಓದಿರಿ.

# ೮ ಯುಗಾದಿ

ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ.
ಹೊಸ ವರುಷಕೆ ಹೊಸ ಹರುಷವ
ಹೊಸತು ಹೊಸತು ತರುತಿದೆ.

ಹೊಂಗೆ ಹೂವ ತೊಂಗಲಲ್ಲಿ
ಭೃಂಗದ ಸಂಗೀತಕೇಲಿ
ಮತ್ತೆ ಕೇಳ ಬರುತಿದೆ.
ಬೇವಿನ ಕಹಿ ಬಾಳಿನಲ್ಲಿ
ಹೂವಿನ ನಸುಗುಂಪು ಸೂಸಿ
ಜೀವಕಳೆಯ ತರುತಿದೆ.

ಕಮ್ಮನೆ ಬಾಣಕ್ಕೆ ಸೋತು
ಜುಮ್ಮನೆ ಮಾಮರವು ಹೂತು
ಕಾಮುಗಾಗಿ ಕಾದಿದೆ.
ಸುಗ್ಗಿ ಸುಗ್ಗಿ ಸುಗ್ಗಿ ಎಂದು
ಹಿಗ್ಗಿ ಗಿಳಿಯು ಸಾಲು ಸಾಲು
ತೋರಣದೊಲು ಕೋದಿದೆ.

ವರುಷಕೊಂದು ಹೊಸತು ಜನ್ಮ
ಹರುಷಕೊಂದು ಹೊಸತು ನೆಲೆಯು
ಅಖಿಲ ಜೀವ ಜಾತಕೆ!

ಒಂದೆ ಒಂದು ಜನ್ಮದಲ್ಲಿ
ಒಂದೆ ಬಾಲ್ಯ ಒಂದೆ ಹರೆಯ
ನಮಗದಷ್ಟೆ ಏತಕೆ?

ನಿದ್ದೆಗೊಮ್ಮೆ ನಿತ್ಯ ಮರಣ
ಎದ್ದ ಸಲ ನವೀನ ಜನನ
ನಮಗೆ ಏಕೆ ಬಾರದೊ?
ಎಲೆ ಸನತ್ಕುಮಾರ ದೇವ!
ಸಲೆ ಸಾಹಸಿ ಚಿರಂಜೀವ!
ನಿನಗೆ ಲೀಲೆ ಸೇರದೋ?

ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ.
ಹೊಸ ವರುಷಕೆ ಹೊಸ ಹರುಷವ
ಹೊಸತು ಹೊಸತು ತರುತಿದೆ
ನಮ್ಮನಷ್ಟೆ ಮರೆತಿದೆ!

—ಅಂಬಿಕಾತನಯ ದತ್ತ



## ಪರಿಚಯ

ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಇವರು ಈಗ ಡಿ. ಏ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ.

ಈ ಕವಿತೆಯನ್ನು ಅಂಬಿಕಾತನಯ ದತ್ತ (ಬೇಂದ್ರೆ) ಅವರ 'ಗರಿ' ಎಂಬ ಕವನ ಸಂಗ್ರಹದಿಂದ ಆಯ್ದುಕೊಂಡಿದೆ. ಶ್ರೀ ಬೇಂದ್ರೆಯವರು ಆಧುನಿಕ ಕವಿಗಳಲ್ಲಿ ಶ್ರೇಷ್ಠರು. ಇವರು ಬರೀ ಕವಿಗಳಷ್ಟೆ ಅಲ್ಲ, ಮೇಲ್ತರಗತಿಯ ವಿಮರ್ಶಕರು, ತತ್ವಜ್ಞರು, ವಾಗ್ಮಿಗಳು. 'ಗರಿ' 'ನಾದಲೀಲೆ' 'ಉಯ್ಯಾಲೆ' 'ಸಖೀಗೀತ' 'ಮೂರ್ತಿ' ಮೊದಲಾದವು ಇವರ ಕವನಸಂಗ್ರಹಗಳು. 'ಸಾಹಿತ್ಯ ಮತ್ತು ವಿಮರ್ಶೆ, "ನಿರಾಭರಣ ಸುಂದರಿ'' ಮೊದಲಾದವು ಗದ್ಯಗ್ರಂಥಗಳು. ಇವರ ಕಾವ್ಯಶಕ್ತಿಯನ್ನು ಕುರಿತು ಶ್ರೀಮಾಸ್ತಿಯವರು ಹೀಗೆ ಹೇಳಿದ್ದಾರೆ.

"ಬೇಂದ್ರೆಯವರ ಕಾವ್ಯದೃಷ್ಟಿ ತೀವ್ರವಾದುದು. ಶ್ರೇಷ್ಠವರ್ಗದ್ದು ವಿಲಕ್ಷಣವಾದುದು. ಜೊತೆಗೆ ಅವರ ಜೀವನ ಅವರಿಗೆ ತೀವ್ರವಾದ, ಶ್ರೇಷ್ಠವಾದ, ವಿಲಕ್ಷಣವಾದ ಅನುಭವವನ್ನು ತಂದಿದೆ. ಇದರಿಂದ ಅವರ ಕೃತಿಯಲ್ಲಿ ಇವೇ ಲಕ್ಷಣಗಳು ಮೂಡಿವೆ. ಅವರ ಕಾವ್ಯದ ಬಣ್ಣ ಲೋಕದ ಅತ್ಯುತ್ತಮ ಬಣ್ಣವಾಗಿದೆ''

**ಅಭ್ಯಾಸ**:— ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಯುಗಾದಿಯ ಸಮಯದಲ್ಲಿ ಯಾವ ಹೊಸತನವು ಸೃಷ್ಟಿಯಲ್ಲಿ ಕಂಡು ಬರುತ್ತಿದೆ ?

(೨) 'ಕಾಮುಗಾಗಿ ಕಾದಿದೆ' ಎಂದರೇನು ?

(೩) ಅಖಿಲ ಜೀವ ಜಾತಕ್ಕೂ, ನಮಗೂ ಯಾವ ಭೇದವಿದೆ ಎಂದು ಕವಿಯು ಮಿಡುಕುತ್ತಾನೆ ?

(೪) ನಮಗೆ ಎಂಥ ಸ್ಥಿತಿ ಇರಬೇಕೆಂದು ಕವಿಯ ಆಸೆ ಇದೆ ?

(೫) ಯುಗಾದಿಯ ಚಿತ್ರವು ಕವಿಯ ಅಂತಃಕರಣದಲ್ಲಿ ಯಾವ ಪರಿಣಾಮವನ್ನುಂಟುಮಾಡಿದೆ?

(೬) ಈ ಕವನದಲ್ಲಿ ಕಂಡುಬರುವ ಸೃಷ್ಟಿ ಸೌಂದರ್ಯದ ಚಿತ್ರಗಳನ್ನು ಸಂಗ್ರಹಿಸಿ ಬರೆಯಿರಿ.

# ೯ ಕಾರಿ ಹೆಗ್ಗಡೆಯ ಮಗಳು

ಪಡುವ ದಿಬ್ಬದ ಗೌಡನೊಬ್ಬನು
ಬಿಡದೆ ತೊರೆಯನ ಕೂಗಿಕೊಂಡನು;
ತಡೆಯದೀಗಲೆ ಗಡುವ ಹಾಯಿಸು,
ಕೊಡುವೆ ಕೇಳಿದ ಹೊನ್ನನು.

ಆರು ನೀವೀ ಕರುಗಿ ಮೊರೆಯುವ
ನೀರ ಕಾಯಲ ಹಾಯುವವರು ?
ಪಡುವದಿಬ್ಬದ ಗೌಡ ನಾನೀ-
ಮಡದಿ ಕಾರಿಯ ಕುವರಿಯು.

ಓಡಿ ಬಂದೆವು ಮೂರುದಿವಸ;
ಜಾಡ ಹಿಡಿದು ಹಿಂದೆ ಬಂದರು;
ನಮ್ಮನೀ ಕಣಿವೆಯಲಿ ಕಂಡರೆ
ಚಿಮ್ಮಿ ಹರಿವುದು ನೆತ್ತರು.

ಹತ್ತಿ ಕುದುರೆಯ ತರುಬಿ ಬರುವನು,
ಮುತ್ತಿಕೊಂಡರೆ ನನ್ನ ಕೊಲುವರು;
ಘೋರದುಃಖದ ನಾರಿಯನು ಬಳಿ-
ಕಾರು ನಗಿಸಲು ಬಲ್ಲವರು ?

ಆಗ ಅಂಜದೆ ತೊರೆಯನೆಂದನು;
ಬೇಗ, ಜೀಯಾ, ಓಡ ತರುವೆನು,
ಕಡಲು ನೊರೆಗಡದೆದ್ದು ಕುದಿಯಲಿ
ಗಡುವ ಹಾಯಿಸಿ ಬಿಡುವೆನು.

ತೂರು ಗಾಳಿಗೆ ಕಡಲು ಕುದಿಯಿತು,
ನೀರದೆವ್ವ ಗಳರಚಿಕೊಂಡವು.
ಹೆಪ್ಪು ಮೋಡದ ಹುಬ್ಬುಗಂಟಿಗೆ
ಕಪ್ಪಗಾದವು ಮುಖಗಳು.

ಕೆರಳಿ ಕೆರಳಿ ಗಾಳಿ ಚುಚ್ಚಿತು ;
ಇರುಳು ಕತ್ತಲೆ ಕವಿದು ಮುಚ್ಚಿತು ;
ಕಣಿವೆಯುಳಿವರ ಕುದುರೆ ಕತ್ತಿಯ
ಖಣಿಖಣಿ ಧ್ವನಿ ಕೇಳಿತು !

ಏಳು, ಬೇಗೇಳಣ್ಣ, ಎಂದಳು :
ಹೂಳಿಕೊಳಲಿ ನನ್ನ ಕಡಲು,
ಮುಳಿದ ಮುಗಿಲ ತಡೆಯು ಬಲ್ಲೆ,
ಮುಳಿದ ತಂದೆಯ ತಡೆಯೆನು.

ಇತ್ತ ಕರೆ ಮೊರೆ ಹಿಂದಕಾಯಿತು ;
ಅತ್ತ ತೆರೆ ಮೊರೆ ಸುತ್ತಿಕೊಂಡಿತು ;
ಆಳ ಕೈಯಲಿ ತಾಳಬಹುದೇ
ಏಳು ಬೀಳಿನ ಕಡಲದು !

ಅಲೆಗಳಬ್ಬರದಲ್ಲಿ ಮೀಟಿ
ಮುಳುಗುತಿಹರು, ಏಳುತಿಹರು–

ಕರೆಗೆ ಬಂದ ಕಾರಿಹೆಗ್ಗಡೆ,
ಕರಗಿ ಮುಳಿಸು ಅತ್ತನು !

ತೊಂಡು ತೆರೆಗಳ ಮುಸುಕಿನಲ್ಲಿ,
ಕಂಡು ಮಗಳ, ಕರಗಿಹೋದ-
ಒಂದು ಕೈ ನೀಡಿದಳು ನೆರವಿಗೆ,
ಬಂದು ತಬ್ಬಿತು ನಲ್ಲನ !

ಮರಳು, ಮರಳು ಮಗಳೆ ಎಂದ,
ಮೊರೆವ ಕಾಯಲ ಗಂಟಲಿಂದ;
ಮರೆತೆ ಒಪ್ಪದೆ ನಿನ್ನ ನಲ್ಲನ ,
ಮರಳು ಕಂದಾ ಎಂದನು.

ಮರಳ ಬಹುದೆ ? ಹೋಗ ಬಹುದೆ ?
ಕರೆಯ ತೆರೆಯುಪ್ಪಳಿಸಿ ಹೊಯ್ದು
ಹೊರಳಿ ಹೋದುವು ಮಗಳ ಮೇಲೆ,
ಕೊರಗಿನಲಿ ಅವನುಳಿದನು.

-ಶ್ರೀ.



# ಪರಿಚಯ

ಉದಯೋನ್ಮುಖ ಕನ್ನಡನಾಡಿನ ಭಾಗ್ಯಶ್ರೀಗೆ ತಾವು 'ಶ್ರೀ'ಕಾರವಾಗುವೆವೆಂಬದಿವ್ಯಜ್ಞಾನದಿಂದಲೇ ಇವರು ಶ್ರೀಎಂಬ ಕಾವ್ಯ ನಾಮವನ್ನಿಟ್ಟುಕೊಂಡಂತಿದೆ. ಕನ್ನಡ ಸಾರಸ್ವತ ಶಾಕುಂತಲೆಯನ್ನು ಬೆಳಸಿಕೊಂಡುಬಂದ ಕಣ್ವಋಷಿಗಳು ಎಂದು, ಇವರನ್ನುಕೊಂಡಾಡಿದ್ದಾರೆ ಇವರ ಪೂರ್ಣಹೆಸರು ಬಿ. ಎಂ. ಶ್ರೀಕಂಠಯ್ಯ ಎಂದು ಕನ್ನಡ, ಅಂಗ್ಲ, ಎರಡು ಭಾಷೆಗಳಲ್ಲಿಯೂ ಘನವೆತ್ತ ಪಾಂಡಿತ್ಯ ಇವರದು. ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷುಪ್ರಾಧ್ಯಾಪಕರಾಗಿ ದುಡಿದು ನಿವೃತ್ತರಾದರೂ ಕನ್ನಡ ನಿರ್ಮಾಣದಲ್ಲಿಯೇ ತಮ್ಮ ಜೀವನವನು ಸವೆಸಿದವರು. ಇವರು ತಮ್ಮ ವಾಙ್ಮಯ ತಪಸ್ಸಿನ ಪುಣ್ಯಫಲವಾಗಿ ಮೊಟ್ಟಮೊದಲು ನೀಡಿದ 'ಇಂಗ್ಲಿಷ ಗೀತಗಳು' ಕನ್ನಡದ ನೂತನ ಛಂದಸ್ಸಿನ ನಿರ್ಮಾಣಕ್ಕೇ ಚಾಲನೆಯನ್ನು ಕೊಟ್ಟಿತು ಎಂದು ಹೇಳಬಹುದು.

ಇವರ 'ರನ್ನನ' ಗದಾಯುದ್ಧ' 'ಅಶ್ವತ್ಥಾಮ' 'ಪಾರಸಿಕರು ಎಂಬ ಹಳಗನ್ನಡ ನಾಟಕಗಳು ಕನ್ನಡ ಸಾಹಿತ್ಯದಲ್ಲಿ ಅಮರ ಕೃತಿಗಳಾಗಿವೆ.

ಈ ಗೀತವನ್ನು ಇವರ 'ಇಂಗ್ಲಿಷ ಗೀತಗಳು' ಎಂಬ ಸಂಗ್ರಹದಿಂದ ಅರಿಸಿಕೊಂಡಿದೆ. ಇಲ್ಲಿ ಕತೆ ಹೇಳುವ ರೀತಿ ಸೊಗಸಾಗಿದೆ. ತಿಳಿದುಗನ್ನಡದ ಶಬ್ದಗಳ ಚೆಲುವಿಕೆ ಇಲ್ಲಿ ತುಂಬಾ ಎದ್ದು ಕಾಣುತ್ತಿದೆ. ಇದುCampbellಎಂಬ ಅಂಗ್ಲ ಕವಿಯ Lord Ullin's Daughter ಎಂಬ ಕವಿತೆಯ ಅನುವಾದವಾಗಿದೆ.

**ಅಭ್ಯಾಸಃ—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರಯಿರಿ.**

(೧) ಪಡುವಣದ ಗೌಡನು ಮತ್ತು ಕಾರಿಯ ಮಗಳು ಕಡಲು ದಾಟಲು ಎಕೆ ಆತುರಗಿದ್ದರು?

(೨) ಆ ಸಮಯದಲ್ಲಿ ಕಡಲು ಯಾವರೀತಿಯಾಗಿತ್ತು?

(೩) ಮಗಳು ಸಂಕಟದಲ್ಲಿದ್ದುದನ್ನು ಕಂಡು ತಂದೆಯ ಮನಸ್ಥಿತಿಯು ಹೇಗಾಯಿತು ?

(೪) ಕಾರಿ ಹೆಗ್ಗಡೆಯ ಮಗಳ ಈ ಕೃತಿಯು ಯೋಗ್ಯವಾದುದೆ ?

(೫) ಈ ಪದ್ಯದಲ್ಲಿ ಅಡಕವಾದ ಕತೆಯನ್ನು ಸುಂದರವಾದ ಗದ್ಯದಲ್ಲಿ ಒಂದು ಕತೆಯಾಗಿ ಬರೆಯಬಹುದೆ ?

ಸ್ಪಷ್ಟೀಕರಿಸಿರಿ.

(೧) ಘೋರ ದುಃಖದ ನಾರಿಯನ್ನು ಯಾರು ನಗಿಸಲು
ಬಲ್ಲರು ?

(೨) ಹೆಪ್ಪು ಮೋಡದ ಹುಬ್ಬುಗಂಟಿಗೆ
ಕಪ್ಪಗಾದವು ಮುಖಗಳು.

(೩) ಮುಳಿದ ಮುಗಿಲ ತಡೆಯು ಬಲ್ಲೆ
ಮುಳಿದ ತಂದೆಯ ತಡೆಯೆನು.

(೪) ಅಳ ಕ್ರೈಯಲಿ ತಾಳಬಹುದೆ
ಏಳು ಬೀಳುವ ಕಡಲದು.



## ೧೦ ತಂಗಿ !

ಬಾಳಿನ ಗುಟ್ಟನು ಬಲ್ಲೆನು ತಂಗಿ !
ನಿನಗದನುಸುರಲು ಒಲ್ಲೆನು ತಂಗಿ !
ನೋಡಿದವರ ಕಣ್ಣು ಹೋದವು ತಂಗಿ !
ಕೇಳಿದವರು ಕಿವುಡಾದರು ತಂಗಿ !

ಬಯಲೆಂದು ಕೆಲವರು ಬಾನೆಂದು ಕೆಲವರು
ಹೊನಲೆಂದು ಕೆಲವರು ಅಂದರು ತಂಗಿ !
ಕನಸೆಂದು ಕೆಲವರು ನನಸೆಂದು ಕೆಲವರು
ಮನಸೆಂದು ಕೆಲವರು ಅಂದರು ತಂಗಿ !

ಏನಿದ್ದರೇನದು ? ಜೀವವಿರುವ ತನಕ
ಇದ್ದು ಹೊದರಾಯ್ತು ಎಂದರು ತಂಗಿ !
ಗಳಿಗೆಯ ಜೀವಕ್ಕೆ ಯುಗಗಳ ತರ್ಕದ
ಸಂಪರ್ಕ ಬೇಡೆಂದು ಎಂದರು ತಂಗಿ !

ದೇಶ ದೇಶದಲ್ಲಿ ರೀತಿ ರೀತಿಯ ಭಾಷೆ
ಮಾಡುವವರು ಗ್ರಂಥ ಬರೆದಾರು ತಂಗಿ !
ಸಾವಿನ ಸಮಯದಿ ಒಂದನ್ನು ಅರಿಯದೆ !
ಹಳ್ಳದ ದಾರಿಯ ಹಿಡಿದಾರ ತಂಗಿ !

ಜೀವನವೆಂದರೆ ಮುಳ್ಳಿನ ಹಾಸಿಗೆ,
ಕಳ್ಳಿಯ ಹಾಲಿನ ಘನರಸ ತಂಗಿ !
ಕುಡಿಯಲಾರದೆ ಕುಡಿದು ಕಂಠದಿ ಧರಿಸುತ
ನೀಲಕಂಠರೆಲ್ಲ ಸಿಂತಾರ ತಂಗಿ !

ಹುಟ್ಟಿ ಬಂದ ಮೇಲಿ ಕಟ್ಟಿದ ಬುತ್ತಿಯ
ಗಂಟ ಬಿಚ್ಚಿ ಉಣಬೇಕವ್ವ ತಂಗಿ !
ಎಡವುತ ಮುಗ್ಗುತ ಬೀಳುತ ಏಳುತ
ಊರಿನ ದಾರಿಯ ಹಿಡಿಬೇಕ ತಂಗಿ !

ಸುತ್ತಲಿದ್ದವರನ್ನು ಮತ್ತರಾಗದೆ ನೋಡಿ
ಎತ್ತ ಹೋದರು ಪ್ರೀತಿ ಇರಬೇಕು ತಂಗಿ !
ದೇವನ ಪಾದವ ಭಜನೆಯ ಮಾಡುತ
ಅವನ ನಾಮವ ನಂಬಿ ಇರಬೇಕು ತಂಗಿ !

ಹೆಚ್ಚೇನು ಹೇಳಲಿ ? ನಿನ್ನ ಜೀವನ ಮಾಡು
ಅವನಿಗೇರಿಸಿದಂಥ ಹೂವಾಗಿ ತಂಗಿ !
ಅವರ ಚಂದವ ಪೊಂದಿ ಆನಂದವ ಹೊಂದಿ
ಬಾಳೆಂದು ಹರಸ್ಯಾನ ನಿನ್ನಣ್ಣ ತಂಗಿ !

— ವಿನಾಯಕ



# ಪರಿಚಯ

ಈ ಪದ್ಯವನ್ನು ಬರೆದವರು ಪ್ರಿ. ವಿನಾಯಕ ಕೃಷ್ಣ. ಗೋಕಾಕ ಬಿ. ಎ. ಆಗ್ಝನ್. ಇವರು ಕೆಲಕಾಲ ವಿಲಿಂಗ್ಡನ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಈಗ ವೀಸನಗರ (ಬಡೋದಾ) ಕಾಲೇಜಿನಲ್ಲಿದ್ದಾರೆ. ಧಾರವಾಡದಲ್ಲಿ ಗೆಳೆಯರ ಗುಂಪನ್ನು ಕಟ್ಟಿದ ಶ್ರೀ ಬೇಂದ್ರೆಯವರ ಜೊತೆಗಾರರು. 'ಪಯಣ' 'ಸಮುದ್ರಗೀತಗಳು' ಮುಂತಾದ ಕಾವ್ಯಸಂಗ್ರಹಗಳನ್ನೂ 'ಇಜ್ಜೋಡು ಎಂಬ ಸುದೀರ್ಘವಾದ ಕಾದಂಬರಿಯನ್ನೂ, 'ಜನನಾಯಕ' ಎಂಬ ನಾಟಕವನ್ನೂ ಪ್ರಕಟಿಸಿದ್ದಾರೆ. ಇವೆಲ್ಲಕ್ಕಿಂತ ಹೆಚ್ಚಾಗಿ ವಿಮರ್ಶಾಕ್ಷೇತ್ರದಲ್ಲಿ ಇವರ ಪ್ರಸಿದ್ಧಿ ಹೆಚ್ಚು. ಕನ್ನಡದಲ್ಲಿ ವಿಮರ್ಶೆಗೆ ಒಂದು ಗತಿಯನ್ನು ಕೊಟ್ಟ ಶ್ರೇಯಸ್ಸು ಇವರದಾಗಿದೆ. 'ಸಾಹಿತ್ಯದಲ್ಲಿ ಪ್ರಗತಿ' ಎಂಬ ಗ್ರಂಥದಲ್ಲಿಯ ಪ್ರಗತಿಪರ ಸಾಹಿತ್ಯದ ವಿಮರ್ಶೆಯು ಒಳ್ಳೇ ಮನನೀಯವಾಗಿದೆ.

ಈ ಕವನವನ್ನು 'ಪಯಣ'ವೆಂಬ ಕಾವ್ಯಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ. ಜೀವನದ ತಾತ್ವಿಕ ವಿಮರ್ಶೆಯನ್ನು ಜಾನಪದಗೀತದ ರೀತಿಯಲ್ಲಿ ಹೇಳಿದ್ದಾರೆ.

**ಅಭ್ಯಾಸಃ—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) "ಬಾಳಿನ ಗುಟ್ಟನ್ನು, ಉಸಿರಲು ಒಲ್ಲೆನು ತಂಗಿ'' ಎಂದು ಕವಿಯು ಏಕೆ ಹೇಳುತ್ತಾನೆ?

(೨) ಬಾಳಿನ ವಿಷಯಕ್ಕೆ ಬೇರೆ ಬೇರೆ ವಿಚಾರಗಳು ಏನಿವೆ ?

(೩) ಉತ್ತಮ ಬಾಳು ಹೇಗೆ ಆಗಬೇಕೆಂದು ಇವರ ಆಶೆಯಿದೆ. ಸ್ಪಷ್ಟೀಕರಿಸಿರಿ.

(೧) ಗಳಿಗೆಯ ಜೀವಕ್ಕೆ ಯುಗಗಳ ತರ್ಕದ ಸಂಪರ್ಕ ಬೇಡೇದು ಎಂದರು ತಂಗಿ.

(೨) ಕುಡಿಯಲಾರದೆ ಕುಡಿದು ಕಂಠದಿ ಧರಿಸುತ ನೀಲಕಂಠರೆಲ್ಲ ನಿಂತಾರ ತಂಗಿ.

## ೧೧ ಬೇಂದ್ರೆಯವರನ್ನು ಕುರಿತು

ಮುಳಿಯ ಹಸಿಗಳ ನಡುವೆ ತೂರಿಬಹ ಹೊಂಬಿಸಿಲಿ
ಬಣ್ಣ ಬಣ್ಣದ ಬೆಳಕ ಬಲುಮೆಯೊಳ್ನುಡಿಯಿಂದ,
ನಿನಗಲ್ಲದಾರಿಗೂ ಬರದ ಗಾರುಡಿಯಿಂದ,
ಹಕ್ಕಿ ಹಾಡುವ ತೆರನ ಹಾಡಿ, ಕವಿತೆಯ ಹೊಸಲಿ
ನೀ ದಾಂಟಿ ನಿಂತೆ ಗೆಳೆಯ. ನಿನ್ನ ನುಡಿ ಕುಶಲ;
ಊಹೆ ಸುಂದರ, ಭಾವ ಜಗದಂತೆ ವಿಸ್ತಾರ;
ನಿನ್ನೆಣಿಕೆ ಮಾನವನ ಬಾಳ್ವಿಗೇ ಪ್ರಸ್ತಾರ;
ಕಗ್ಗಲ್ಲ ಗಿರಿ ನಿನಗೆ ಸೃಷ್ಟಿ ಕಮಲದ ಎಸಳು.

ಮನುಜನಾತ್ಮದ ವೀರಗಾರ, ಧೈರ್ಯದಿ ಬದುಕ-
ಕೇತಕಿಯ ಹೊಕ್ಕು ಕೇಸರವ ಮೂಸಿದ ತುಂಬಿ
ತಲೆ ತಿರುಗದಂತಿರುವೆ; ಇಳೆಯ ಪಾಪವ ಕೆದಕಿ
ಅದರ ಹೆಡೆ ಹರಡ ತೋರಿಸುತ ನಿತ್ಯಾತಂತ್ರ
ಮಾಂತ್ರಿಕನು, ಬನ್ನಿ ಇದ ಬಡಿದು ಬದುಕಿರಿ, ಎಂಬ
ಮೋಡಿಯನು ಹಿಡಿದು ಜನವನು ಕರೆಯುತಿಹೆ ಬೇಂದ್ರೆ.

- ಶ್ರೀನಿವಾಸ.



# ಪರಿಚಯ

ಈಶ್ವರ ಸಣಕಲ್ಲರು ರಬಕವಿಯವರು. ಈಗ ಬೆಳಗಾವಿಯಲ್ಲಿ ಇರುತ್ತಾರೆ. ಇವರು ಒಳ್ಳೆಯ ಕವಿಗಳು. ಬಹಳ ದಿನಗಳಿಂದಲೂ ತಮ್ಮ ಗೀತಗಳನ್ನು ಕನ್ನಡ ನಾಡಿನ ಸುಪ್ರಸಿದ್ಧ ಮಾಸ ಪತ್ರಿಕೆಗಳಲ್ಲಿ ಪ್ರಕಟಿಸುತ್ತಲಿದ್ದಾರೆ. ಕವಿ ಸಹಜವಾದ ಪ್ರತಿಭೆಯು ಇವರ ಸರಳ ಸುಂದರ ಗೀತಗಳಲ್ಲಿ ಎದ್ದು ಕಾಣುತ್ತದೆ.

ಇವರ 'ಕೊರಿಕೆ' ಕವನಗಳ ಸಂಗ್ರಹವು ರಾ. ಬ. ಫ. ಗು. ಹಳಕಟ್ಟಿಯವರಿಂದ ವಿಜಾಪುರದಲ್ಲಿಯೇ ಪ್ರಕಟವಾಗಿದೆ. ಇವರು 'ವಿಶ್ವಾಮಿತ್ರ—ಮೇನಕ' ಎಂದುವಿಶ್ವಾಮಿತ್ರನ ತಪಸ್ಸಿನ ಕತೆಯನ್ನು ಅಷ್ಟಷಟ್ಪದಿ ಗಳಲ್ಲಿ ಸುಂದರವಾಗಿ ಹೆಣೆದಿದ್ದಾರೆ. ಅಲ್ಲದೇ ಬೇರೆಬೇರೆ ಅನುವಾದ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ.

'ಕೋರಿಕೆ' ಎಂಬ ಕವಿತೆಯನ್ನು ಇವೇ ಹೆಸರಿನ ಗ್ರಂಥದಿಂದ ಆಯ್ದುಕೊಂಡಿವೆ. ಕವಿಯ ತ್ಯಾಗ ಭಾವವು ಈ ಚಿಕ್ಕದಾದ ಪ್ರಾರ್ಥನೆಯಲ್ಲಿ ಎದ್ದುಕಾಣುತ್ತದೆ. ಪ್ರತಿಯೊಬ್ಬರ ಕೋರಿಕೆಯೂ ಹೀಗೆಯೇ ಆದರೆ ದೇಶದ ಸುಖಕ್ಕೂ ಕಲ್ಯಾಣಕ್ಕೂ ವಿಲಂಬವೇ ಆಗದು.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—

(೧) **ಕವಿಯ ಕೊರಿಕೆ ಏನಿದೆ?**

(೨) **ಪ್ರತಿಯೊಂದು ನುಡಿಯಲ್ಲಿ ಒಂದೊಂದು ಬೇಡಿಕೆಯಿದೆ. ಈ ಬೇಡಿಕೆಯ ರೀತಿಯ ವೈಶಿಷ್ಟ್ಯವೇನು?**

(೩) **ಪದ್ಯಕ್ಕೆ ಬೇರೆ ಯಾವ ಹೆಸರನ್ನು ಕೊಡಬಹುದು?**

ಸ್ಪಷ್ಟೀಕರಿಸಿರಿ.

(೧) **ಪೊಡವಿಯೇ ಮೈಯಳಿಯೆ ಮಾಡಲೇನು?**

(೨) **ಹೇ ತಂದೆ ಎನಲೆನ್ನನವನೆ ಕಾವಂ-**

ವ್ಯಾಕರಣ

ತತ್ಸಮ ತದ್ಭವ ಕೊಡಿರಿ:—

**ಕಳಶ, ಧ್ಯಾನ, ಅಚ್ಚರಿ, ಆಗಸ, ಐಸಿರಿ.**

ಸಮಾಸ

**ಕೈಯೊಡ್ಡು, ಮೈಯಾಳಿ, ನಾಲ್ದೆಸೆ.**

ರೂಪಸಿದ್ಧಿ ಹೇಳಿರಿ.

**ಕೋರಿಕೆ, ಅಗ್ಗಳಿಕೆ.**



# ೧೩ ಬಾರಕೂರು

ಪ್ರಾಚೀನ ವೈಭವದ ವಸನವನುಟ್ಟು
ಬಿಂಕದಿ ನಿಂತಿದೆ ಬಾರಕೂರು.
ಭೂಪತಿ ಪಾಂಡ್ಯ ದಿಗಂಬರ ಜೈನರ
ಮಾತೆಯು ವಿಜಯದ ತೌರೂರು
ನಾಡಿಗರೊಲುಮೆಯ ಸೊಗದೂರು

ಕಲಿಗಳಲಿ
ಕಲೆಗಳಲಿ

ಕಾಂತಿಯ ಕಲಶವು ಬಾರಕೂರು.
ಶಿಲ್ಪದ ಹುಟ್ಟೂರು !

ಕಲಕಲ ನಾದದಿ ನಲಿಯುವ ಸೀತೆಯು
ದಡದೆಡೆ ಜಿನ ಚೈತ್ಯಾಲಯವು
ಕಲ್ಲಲಿ ಕಾವ್ಯವ ಕೆತ್ತಿರುವಂತಹ
ನೆತ್ತಿಯನೆತ್ತಿಹ ಮಂಟಪವು
ಬಸದಿಗಳಿಂದ್ರರ ಗುಡುಮಠವು

ಸ್ತಂಬಗಳು
ಬಿಂಬಗಳು

ಕಣ್ಣಿಗೆ ಶಿಲ್ಪದ ಹಬ್ಬಗಳು
ಕಲ್ಲಿನ ಕಬ್ಬಗಳು !

ಕಾಲದ ಪರದೆಯು ಮೇಲಕ್ಕೆದ್ದಿತು
ಈಗವು ಹಿಂದಿನ ಚೆಲು ಕನಸು
ಶತಮಾನಾಂತ್ಯದಿ ಮರೆತಿಹ ಲೋಕಕೆ
ಗತವೈಭವಗಳ ಸವಿನೆನಪು
ಭಾವನೆಯೂಟಕೆ ಸವಿ ತಿನಿಸು

ನಿಜಧರ್ಮ
ಸತ್ಕರ್ಮ
ಮುಳುಗಿಹುದಂದಿನ ಜಲಧಿಯಲಿ
ಕತ್ತಲೆಯಾಳದಲಿ.

ತುಳುವರ ಕೀರ್ತಿಯ ಭೇರಿಯುಮೊಳಗಿದ
ಬಾರ್ಕೂರೆಂಬುದು ಸುಡುಗಾಡೆ!
ಮಮತೆಯಲಾಡಿಸಿ ಭಾಗ್ಯದಿ ಬೆಳಸಿದ
ಸೀತೆಯ ಶಿಶುವಿಗೆ ಈ ಪಾಡೆ!
ನಾಡಿನ ಸೋಲಿಗೆ ಈ ಬೀಡೆ!
ಈಗತಿಯ
ಆಪನ್ನತೆಯ
ಕಾಣುತ ಕವಿಗಳು ಕೊರಗುವರು
ಕಲಿಗಳು ಮರಗುವರು.

ಕಾಲದ ಕಡಲಿನ ತೆರೆಗಳ ಹೊಡೆತಕೆ
ಬಳಲುತ ಮುಳುಗಿದೆ ಬಾರ್ಕೂರು
ಕೂಗಿನ ತಾನಕೆ ಕುಣಿಯುವ ಅಳವಿನ
ಕಾಲಡಿ ಬಿದ್ದಿದೆ ಈಯೂರು.
ಬಾಳಿನಲಿ
ಬೀಳಿನಲಿ
ಇದು ತುಳುನಾಡಿನ ಹಂಪೆ
ಈಗಿದು ಕೊಳೆ ಕೊಂಪೆ.

— ಪೇಜಾವರ ಸದಾಶಿವರಾವ.



# ಪರಿಚಯ

ದಿವಂಗತ ಶ್ರೀಮಾನ್ ಪೇಜಾವರ ಸದಾಶಿವರಾಯರು ಮಂಗಳೂರು ಜಿಲ್ಲೆಯವರು. ಉತ್ತಮ ಕವಿಗಳು. ಒಳ್ಳೆಯ ಕತೆಗಾರರು. ವಿದ್ಯಾರ್ಥಿಗಳಾಗಿದ್ದಾಗಿನಿಂದಲೂ ಮಂಗಳೂರಲ್ಲಿ 'ಮಿತ್ರ ಮಂಡಳಿ' ಯೆಂಬ ಸಂಸ್ಥೆಯನ್ನು ಕಟ್ಟಿಕೊಂಡು ಸಾಹಿತ್ಯ ಸೇವೆಯನ್ನು ಮಾಡುತ್ತಿದ್ದರು. ಇವರು ಕಟ್ಟಿದ ಆ ಸಂಸ್ಥೆಯು ಇನ್ನೂ ನಿರರ್ಗಳವಾಗಿ ತನ್ನ ಕಾರ್ಯವನ್ನು ಸಾಗಿಸುತ್ತಲೇ ಇದೆ.

ಶ್ರೀಮಾನ್ ಸದಾಶಿವರಾಯರು ಸಾಹಸಿಗಳೂ, ಕರ್ತೃತ್ವ ಶಾಲಿಗಳೂ ಆದ ವಿದ್ಯಾರ್ಥಿಗಳಾಗಿದ್ದರು. ಇವರು ಕಾಶಿಯ 'ಹಿಂದೂ ವಿಶ್ವವಿದ್ಯಾಲಯ'ದಲ್ಲಿ ತಮ್ಮ ಇಂಜನಿಯರಿಂಗ ವಿಜ್ಞಾನದ ಅಭ್ಯಾಸವನ್ನು ಮುಗಿಯಿಸಿ ಅಲ್ಲಿಯೇ ಕೆಲವು ದಿನ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಇವರು ಮುಂದೆ ಇಂಜನಿಯರಿಂಗ ವಿಷಯದ ಪ್ರೌಢ ಅಭ್ಯಾಸಕ್ಕಾಗಿ ಇಟಲಿಗೆ ತೆರಳಿದರು. ಇವರು ತಮ್ಮ ಅಭ್ಯಾಸವನ್ನು ಸಾಗಿಸುತ್ತಿರುವಾಗಲೇ ಕರುಳು ಬೇನೆಯಿಂದ ಆಸ್ಪತ್ರೆಯಲ್ಲಿ ಮರಣ ಹೊಂದಿದರು.

ಶ್ರೀಮಾನ್ ಸದಾಶಿವರಾಯರು ಚಿಕ್ಕ ವಯಸ್ಸಿನಲ್ಲಿಯೇ ಸಾಹಿತ್ಯ ಪ್ರಪಂಚದಲ್ಲಿ ತುಂಬಾ ಖ್ಯಾತಿಯನ್ನು ಗಳಿಸಿದ್ದರು. ಇವರ ಪತ್ರಗಳಲ್ಲಿ, ಕವಿತೆಗಳಲ್ಲಿ, ಇತರ ಲೇಖನಗಳಲ್ಲಿ ಕನ್ನಡದ ಉಜ್ವಲವಾದ ಅಭಿಮಾನವು ಉಕ್ಕುತ್ತಿತ್ತು. ಇವರಿಗೆ ಉಜ್ವಲವಾದ ಭವಿಷ್ಯವಿತ್ತು. ಇವರ ಅಕಾಲ ಮರಣದಿಂದ ಕನ್ನಡ ಸಾಹಿತ್ಯಕ್ಕೂ, ನಾಡಿಗೂ ತುಂಬಿಬರದ ಹಾನಿಯಾಗಿದೆ.

'ಬಾರಕೂರು' ಕವಿತೆಯನ್ನು ಮಂಗಳೂರಿನ 'ಮಿತ್ರ ಮಂಡಳಿ' ಯವರು ಪ್ರಕಟಿಸಿದ 'ನಮ್ಮ ಕವಿತೆಗಳು' ಎಂಬ 'ಕವನ ಸಂಗ್ರಹ' ದಿಂದ ಆಯ್ದುಕೊಂಡಿದೆ. ಕನ್ನಡ ನಾಡಿನ ಪುರಾತನ ವೈಭವವನ್ನೂ ಕೆಚ್ಚನ್ನೂ ಈ ಕವಿತೆಯಲ್ಲಿ ತುಂಬಿ ಬರುವಂತೆ ಚಿತ್ರಿಸಲಾಗಿದೆ.

ಅಭ್ಯಾಸ:—

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಬಾರಕೂರು ಕನ್ನಡ ನಾಡಿನ ಯಾವ ಭಾಗದಲ್ಲಿ ದೆ?

(೨) ಈ ಊರಲ್ಲಿ ಕಾಣುವ ಗತವೈಭವದ ಕುರುಹುಗಳು ಯಾವವು?

(೩) "ಕಲ್ಲಿನ ಕಬ್ಬಗಳು" ಯಾವವು? ಮತ್ತು ಅವುಗಳಿಗೆ ಕಬ್ಬ ಗಳೆಂದು ಹೇಳುವ ಔಚಿತ್ಯವೇನು ?

(೪) ಬಾರಕೂರಿನ ಈಗಿನ ಅವನತಿಯನ್ನು ನೋಡಿ ಕವಿಗೆ ಏನು ಅನಿಸುವದು ?

(೫) ಬಾರಕೂರು ತುಳುನಾಡಿನ ಹಂಪೆಯೆಂದು ಕವಿಯು ಏಕೆ ಹೇಳುತ್ತಾನೆ ?

(೬) ಬೇಂದ್ರೆಯವರು ಬರೆದ "ಹಂಪೆ ವಿಜಯನಗರದ ದರ್ಶನ" ವನ್ನು ಓದಿರಿ.

ಸ್ಪಷ್ಟೀಕರಿಸಿರಿ:—

(೧) ಕಾಲದ ಪರದೆಯು ಮೇಲಕ್ಕೆದ್ದಿತು.

(೨) ಕೂಗಿನ ತಾನಕೆ ಕುಣಿಯುವ ಅಳಿವಿನ ಕಾಲಡಿ ಬಿದ್ದಿದೆ ಈಯೂರು.



# ೧೪ ಕೊಡಗು

ಕೊಡಗು ಬೆಡಗಿನ ಬೀಡು! ಸೌಂದರ್ಯದಮೃತಮಂ।
ಕುಡಿಯಿರಲೆ ಕಣ್ಗಳಿರ! ಇದೊ ಮಂಜು ಬಿತ್ತರಿಸಿ।
ಕಡಲವೊಲ್ ತೋರ್ದಪುದು ಮೇಲೇಳ್ವ ಗಿರಿಸಾನುಗಳ್
ದ್ವೀಪ ನಿವಹಮಾಗೆ ॥

ಅಡಿಯಿಂದೆ ಮುಡಿವರಂ ಬೆಟ್ಟುಗಳ್ ನೀಳ್ದಿಸೆವ।
ಗಿಡುಗಳಿಂ ಪಸುರೇಱಿ ಸೌಂದರ್ಯದಧಿದೇವಿ।
ಮುಡಿಯಾಡುವೊಲ್ಪೆತ್ತಿಡೆಗಳಾಗಿತ್ತಲಿದೊ ಸೊಗಯಿಸುವ
ಸೊಂಪುವೆತ್ತು ॥೧॥

ಬಿಸಿಲೆಲೆಗಳೊಳಗಿಂದೆ ಸೋಸಿ ಬರ್ಪುದು ಮತ್ತೆ।
ಪಸುರ ಮೇಲ್ ನೀರ ಮೇಲಲೆವೆಲರ್ ಸುಳಿದಪುದು।
ಬಿಸುಪಳಿಯದಿರ್ದಪುದೆ? ಕೊಡಗು ತಣ್ಣೆಳಲ ತವರೂರಲೇ
ತಣ್ಪಿನಿಂಬು ॥

ಪೊಸತೆರದ ಬಗೆವಗೆಯ ವಿಹಗಂಗಳಿತ್ತಲುಂ।
ಮಿಸುಪ ಸ್ವವರ್ಣ್ಣದಿಂ ಮನವೊಲಿಪ ಮಾಟದಿಂ —।
ಪೆಸರ್ದು ನುಣ್ದನಿಗುಡುತೆ ನಲಿದಪುವು ಮನಮಿಲ್ಲಿ
ನಲ್ಮೆಗಗಳೆಡೆಯಾದುದು ॥೨॥

ಪರಿವ ಕಾಳ್ಪುರದ ಪೊಲ್ಲುಲಿಯಿಂದೆ ಬಗೆಗೊಳಿಪ,
ಪರಿಯಿತ್ತಲುತ್ತುಂಗ ಶಿಖರಂಗಳಿಂದೆಸೆವ।
ಗಿರಿಯತ್ತಲೇಂ ಪೆಂಪೊ! ತಂಬೆಲರ ಸೊಗಯಿಸುವಸೋಂಕಿನಿಂ
ಸೊಗವಿಡಿದೆನೀತೊ ॥

ಬಿರಿವೂಗಳಿನಿಗಂಪಿಗೆನಿತೊಂದು ತುಂಬಿಗಳೊ ।
ಸುರ ಯುವತಿಯರ್ ನಲ್ಲರೊಡನಿಲ್ಲಿ ಸಾತ್ಕಂಮ ।
ಸರಸವಾಡಲ್ಕುಚಿತಮಾದ ನೆಲಮಿದು ! ಕೊಡಗು ಕರುನಾಡ
ಮುದ್ದುಗೂಸು. ॥ ೩ ॥

ಚೆಲುವಿನೀ ಕಡಲೊಳಗೆ ಸಾಲ್ವಿಡಿದು ಸೊಂಪೆಸೆವ
ಮಲೆಗಳಿವು ಸವಿಕಂಪ ತರುರಾಜಿಗಳಿನದೇ—
ನಲಿವಲೆವ ತೆರೆಗಳೆಂತೆಸೆದಪ್ಪುವೊ ! ನವಸೃಷ್ಟಿಯಿಂ ಸೃಷ್ಟಿಗೇಂ
ಕಾಂತಿಯೊ ! ॥

ನೆಲಮಾಗಸಂ ದಿಕ್ಕುಗಳ್ ರಾಮಣೀಯಕದ
ನಿಲಯಂಗಳಿವನೆನಿತು ನೋಡಿದೊಡಮಕ್ಷಿಗಳ್
ತೊಲಗಲೊಲ್ಲವು ಮನಂ ತಣಿಯದೋಲಾಡಿ ಸೌಂದರ್ಯದೀ
ಜಲಧಿಯಲ್ಲಿ. ॥ ೪ ॥

ಬಂದೆ ನಾನಿಲ್ಲಿಗೆನ್ನಕ್ಕರಿನ ತಾಯ್ನೆಲದ ।
ಚೆಂದಮಂ ನೋಡುತುಂ ಶ್ರೀನಿವಾಸನ ಸಖ್ಯ - ।
ಯಿಂದೆ ಸುಖದಿಂದೆ ಸಂಚರಿಸುತುಂ ಬಹುಕಾಲದಿಚ್ಛೆ
ಕೈಗೂಡಿತೆಂದು ॥

ಎಂದು ಕಣ್ತುಂಬೆ ಕರುನಾಡ ಚೆಲುವಂ ಕಾಣ್ಬೆ — ।
ನೆಳದು ಮನದೊಳನಿಶಮಾಗೆ ಚಿಂತಿಸುತಿರ್ದೆ —
ನಂದು ತೀರಿದಿರ್ದರಾರಿಂತು ಸೊಬಗಿನ ಸುಗ್ಗಿಯಿದಿರೊಳಾಂ
ನಿಲ್ವೆನೆಂದು ॥ ೫ ॥

ಎನ್ನ ನಾಡಂದಮಿಂತೆಂದು ಭಾವಿಸಿದೆ ನಿ —
ಲ್ಲಿನ್ನೆಗಂ ! ಭಾವನೆಗೆ ಚೆಂದಮಿದು ನಿಲಕುವುದೆ ?
ನಿನ್ನ ಸೌಂದರ್ಯಮಿದು ನಿನ್ನಪೆರ್ಮೆಯ ಕುರುಪು !
ಕರುನಾಡೆ ಪುಣ್ಯಭೂಮಿ ॥

ಇನ್ನರಿವುದರಿವಲ್ತು ನಿರ್ಮಳಾಂತಃಕರಣ —
ರುನ್ನತ ಗುಣೋದಯರ್ ಮಂಗಳ ನಿಕೇತನರ್
ನಿನ್ನೊಡಲೊಳಿಂತುದಯಿಸಿದರೆಂದು ! ಕರುನಾಡು
ದೇವರಳ್ಕರಿನ ನಾಡು. ॥೬॥

ದರಿಗಳಿರ, ಗಿರಿಗಳಿರ, ಝರಿಗಳಿರ, ಮೃಗಪಕ್ಷಿ—
ತರುಗಳಿರ, ಪೂಗಳಿರ, ತಂಬೆಲರೆ, ಬೆಳ್ಮುಂಜೆ,
ನರುಗಂಪೆ, ಇಂಚರವೆ, ಬೀಳ್ಕೊಳ್ವೆನೈ ! ನಮೋ ! ನಿಮ್ಮ
ಸೌಹಾರ್ದಮೆನಿತೊ ! ॥

ಇರಿಸಿದಿರ್ ಸೌಂದರ್ಯ ಸಾರ ಸರ್ವಸ್ವಮಂ
ತೆರೆದೆನ್ನ ಮುಂದೆ ನೀಮ್ ! ಪೊರಗಣ್ಗೆ ನೀಮಿನ್ನು
ಮರೆಯಾದೊಡಂ ಹೃದಯ ಭಿತ್ತಿಯೊಳ್ ಚಿತ್ರಿತರ್
ನಿಮ್ಮನಾಂ ಮರೆವುದೆಂತು ? ॥೭॥

— ಸಾಲಿ ರಾಮಚಂದ್ರರಾಯರು.



# ಪರಿಚಯ

ಸಾಲಿ ರಾಮಚಂದ್ರರಾಯರು ಉತ್ತರ ಕರ್ನಾಟಕದ ಹಿರಿಯ ಕವಿಗಳು. ಸುಪ್ರಸಿದ್ಧ ಸಾಹಿತಿಗಳೂ, ಸಾಹಿತ್ಯ ಸಂಶೋಧಕರೂ ಆದ ಶ್ರೀಮಾನ್ ಗೋವಿಂದ ಪೈ ಅವರು ಶ್ರೀ. ಸಾಲಿಯವರ ಪರಿಚಯವನ್ನು ಮಾಡುತ್ತ ಹೀಗೆ ಹೇಳಿದ್ದಾರೆ :—

" ಕನ್ನಡ ಸಾಹಿತ್ಯದಲ್ಲಿ ಸಾಲಿಯವರೆಂದರೆ ಕವಲು ದಾರಿಗಳ ಕೈಯ್ಕಂಬದಂತೆ. ಅವರ ಲೇಖನಿ ಹಳದಾರಿಗೂ ಚಾಚಿದೆ, ಹೊಸದಾರಿಗೂ ಚಾಚಿದೆ. ಅವರ ಕಾವ್ಯದೇವಿ ಇಂದಿನ ಕನ್ನಡಕ್ಕೆ ಒಪ್ಪುವಂತೆ ಪ್ರಾಯದಲ್ಲಿ ಹೊಸಬಳೇ ಆದರೂ ಠೀವಿಯಲ್ಲಿ ಒಂದು ಬಣ್ಣಕ್ಕೆ ಹಳಬಳು. ಅವಳಿಗೆ ಹಳೆಯ ಛಂದಸ್ಸುಗಳ ಉಡಿಗೆಯಲ್ಲಿ ಮೆಚ್ಚು, ಪ್ರಾಸದ ತೊಡಿಗೆಯಲ್ಲಿ ನೆಚ್ಚು.

ಇವರು ರಾಷ್ಟ್ರೀಯ ಕವಿಗಳು. ರಾಷ್ಟ್ರೀಯ ಭಾವನೆಗಳು ಇವರ ಕವಿತೆಯಲ್ಲಿ ತುಂಬ ಸೂಸುತ್ತವೆ.

ಇವರು ಧಾರವಾಡದವರು. ಕರ್ನಾಟಕ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ ಕೆಲಸಮಾಡಿ ಈಗ ನಿವೃತ್ತರಾಗಿದ್ದಾರೆ. ಇವರ ಭಾವಗೀತಗಳೂ, ಕವಿತೆಗಳೂ 'ಚಿತ್ರಸೃಷ್ಟಿ' ಎಂಬ ಸುಂದರವಾದ ಹೊತ್ತಿಗೆಯಲ್ಲಿ ಪ್ರಕಟವಾಗಿವೆ. ಇವರು ಸಂಪೂರ್ಣ' ರಾಮಾಯಣವನ್ನು ಸುಲಭವಾದ ಶೈಲಿಯು-' ಹಾಡುಗಬ್ಬ ' ದಲ್ಲಿ ರಚಿಸಿದ್ದಾರೆ. ಈಗಾಗಲೇ ಪ್ರಕಟವಾದ ' ಬಾಲಕಾಂಡ ' ' ಅಯೋಧ್ಯಾಕಾಂಡ ' ದ ಪ್ರತಿಗಳು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿವೆ.

ಈಗ ಆಯ್ದುಕೊಂಡ ಸುಂದರವಾದ ಕವಿತೆಯು ' ಚಿತ್ರಸೃಷ್ಟಿ' ಎಂಬ ಪುಸ್ತಕದಿಂದ ಇದರಲ್ಲಿ ಕೊಡಗಿನ ಸೃಷ್ಟಿಸೌಂದರ್ಯವನ್ನು ಸೊಗಸಾಗಿ ವರ್ಣಿಸಲಾಗಿದೆ. ವಾರ್ಧಿಕ ಷಟ್ಪದಿಯ ರಚನೆಯಲ್ಲಿ ಶ್ರೀ. ಸಾಲಿಯವರು ತಮ್ಮ ಪಳಗಿದ ಪ್ರತಿಭೆಯನ್ನು ತೋರಿಸಿದ್ದಾರೆ.

**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) ಕೊಡಗಿನ ಸೃಷ್ಟಿ ಸೌಂದರ್ಯವನ್ನು ಕವಿಯು ಹೇಗೆ ವರ್ಣಿಸಿದ್ದಾನೆ?
(೨) ಕೊಡಗನ್ನು ಕಂಡು ಕರುನಾಡ ವಿಷಯಕ್ಕೆ ಕವಿಗೆ ಉಂಟಾದ ಭಾವನೆಗಳು ಯಾವವು?
(೩) ಕೊಡಗನ್ನು ಬೀಳ್ಕೊಳ್ಳುವಾಗ ಕವಿಯು ಹೇಳುವ ಮಾತುಗಳು ಯಾವವು?
(೪) ಪಂಪನ ಬನವಾಸಿ ವರ್ಣನೆ, ರತ್ನನ 'ಮಡಿಕೇರಿಲಿ' ಮಂಜು ಇವುಗಳನ್ನು ಓದಿರಿ.

**ಸ್ಪಷ್ಟೀಕರಿಸಿರಿ:—**

(೧) ಸೌಂದರ್ಯದಧಿದೇವಿಯೆಡೆಯಾಡುವ ಒಳ್ಪುವೆತ್ತೆಡೆಗಳಾಗಿ
ಇತ್ತ ಇದೋ ಸೊಗಯಿಪವು.
(೨) ಮನಮಿಲ್ಲಿ ನಲ್ಮಗೆಗಳಿಗೆಡೆಯಾದುದು.
(೩) ಕರುನಾಡು ದೇವರಕ್ಕರಿನ ನಾಡು.
(೪) ಪೊರಗಣ್ಗೆ ನೀಮಿನ್ನು ಮರೆಯಾದೊಡಂ
ಹೃದಯಭಿತ್ತಿಯೊಳ್ ಚಿತ್ರಿತರ್.

ಕೆಳಗಿನ ಕೂಡುನುಡಿಗಳನ್ನು ಕೂಡಿಸಿ ಹೇಳಿರಿ.

ತಂಪು ನೆಳಲು, ಮೃದು ಉಲಿ, ಕಾಡಿನ ಪುರ, ತಣ್ಣಗಿನ ಎಲರು, ಬಿಳಿಯ ಮಂಜು, ಇನಿದು ಸರ

ಈ ಕೂಡುನುಡಿಗಳು ಯಾವವು?

ನಿಬಂಧ ಬರೆಯಿರಿ:—

ನಾನು ಕಂಡ ಸೃಷ್ಟಿಸೌಂದರ್ಯ.



## ೧೫ ಭಾರತ ಹುಣ್ಣಿಮೆ

ಭಾರತ ಸೃಷ್ಟಿಯು ಭಾರವ ನಿಳುಹುವ
ಭಾರತ ಹುಣ್ಣಿಮೆಯೊಂದಿಗೆ ಬಹುದೋ ! ||ಪ||

ಬರುವದು ಬರುವದು ಎನ್ನುತ ಎನಿತೋ
ಭಾರತ ಹುಣ್ಣಿಮೆ ಸಾರುತ ಸಾರಿದವೋ ! ಅ. ಪ.

ಹೊಮ್ಮುವ ತಿಳಿನಗೆ ತುಂಬಿದ ಹೊಂಗಳೆ
ಮೈ ಮನಸಗೂಟದ ಬೆಳೆ ತೀವಿದ ಇಳೆ
ಜೀವರ ಎಲ್ಲರ ಜೀವನ-ಪೂರ್ಣಿಮೆ
ಭಾರತ ಹುಣ್ಣಿಮೆಯೊಂದಿಗೆ ಬಹುದೋ !

ತೇಜದ ನಿಜ ಸ್ವಾತಂತ್ರ್ಯದ ಕ್ಷತ್ರದ
ತೇಜಿಯನೇರಿದ ಭಾರತ ರಾಜರ
ಮೊಗ ಮೊಗದಲಿ ಬಿಳಿ-ಹೊಳೆಯೊಲು ಮಿರುಗಿದ
ಭಾರತ ಹುಣ್ಣಿಮೆಯೊಂದಿಗೆ ಬಹುದೋ !

ಕಾಲವು ಮರೆತರು ಮರೆಯದ ಕಾಲದಿ
ದೇವನ ಉಸಿರಿನ ಉಯ್ಯಾಲೆಯಾಗಿ
ಬಾಳಿದ ಧೀರರ ತಿಳಿವಿನ ಹುಣ್ಣಿಮೆ
ಭಾರತ ಹುಣ್ಣಿಮೆಯೊಂದಿಗೆ ಬಹುದೋ !

ಕೂಗಿಪೆ ಮರವಿಗೆ ಸಾವಿಗೆ ಸೋಲಿಗೆ
ಬಾಗಿದ ಚಿತ್ತದ ಬಡತನ ಹುಣ್ಣಿಮೆ !
ಹುಣ್ಣಿಮೆಯಲಿ ತೋರುವ ಹಿರಿಗತ್ತಲೆ !
ಭಾರತ ಹುಣ್ಣಿಮೆಯೊಂದಿಗೆ ಬಹುದೋ !

— ರಂ. ಶ್ರೀ. ಮುಗಳಿ.

# ಪರಿಚಯ

ರಂ. ಶ್ರೀ. ಮುಗಳಿ ಅವರು ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳದವರು ಎಂ. ಎ. ಬಿ. ಟಿ. ಪದವೀಧರರು. ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಕನ್ನಡದ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ.

ಇವರು ಸುಪ್ರಸಿದ್ಧ ಸಾಹಿತಿಗಳೂ, ಪ್ರತಿಭಾವಂತ ಕವಿಗಳೂ ಉತ್ತಮ ಗಮಕಿಗಳೂ, ಪ್ರಭಾಸ್ವಿತ ಭಾಷಣಕಾರರೂ, ನುರಿತ ವಿಮರ್ಶಕರೂ ಆಗಿರುವದಲ್ಲದೇ ಒಳ್ಳೆಯ ಕಾದಂಬರಿಕಾರರೂ, ಉತ್ತಮ ನಾಟಕಕಾರರೂ, ಪ್ರಬಂಧ ಲೇಖಕರೂ ಆಗಿರುತ್ತಾರೆ. ಕನ್ನಡ ಸಾಹಿತ್ಯವನ್ನು ಮನಮುಟ್ಟಿ ಅಭ್ಯಾಸಮಾಡಿ ಅದರ ಆಳವಾದ ರಹಸ್ಯವನ್ನರಿತು ಸಾಹಿತ್ಯ ಪ್ರಪಂಚಕ್ಕೆ ಅದರ ಜ್ಞಾನ ಮಾಡಿಕೊಡಬೇಕೆಂಬ ಪ್ರಾಮಾಣಿಕವಾದ ಹಂಬಲ ಇವರಲ್ಲಿದೆ.

‘ಭಾರತ ಹುಣ್ಣಿವೆ’ ಎಂಬುದು ರಾಷ್ಟ್ರೀಯ ಭಾವನೆಯನ್ನು ಉದ್ದೀಪಿಸುವ ಗೀತೆ. ಇದನ್ನು ‘ಬಾಸಿಗ’ ಎಂಬ ಕವನ ಸಂಗ್ರಹದಿಂದ ಆಯ್ದುಕೊಂಡಿದೆ.

**ಅಭ್ಯಾಸ :—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧) **“ಭಾರತ ಹುಣ್ಣಿವೆ” ಎಂಬುದಕ್ಕೆ ಕವಿಗಳು ಯಾವ ವಿಚಾರವನ್ನು ಕಲ್ಪಿಸಿದ್ದಾರೆ ?**

(೨) **“ಈ ಹುಣ್ಣಿಮೆಯ ದಿನ ಕಾಣುವ ಸೃಷ್ಟಿ ಸೌಂದರ್ಯವನ್ನು ಬಣ್ಣಿಸುವ ಪದಗಳು ಯಾವವು ?**

(೩) **ಈ ಪದ್ಯದಲ್ಲಿ ಭಾರತದ-ಗತ ವೈಭವವು ಹೇಗೆ ಮೂಡಿದೆ ?**

(೪) **ಇಂದಿನ ಭಾರತದ ಸ್ಥಿತಿಯನ್ನು ಕವಿಯು ಹೇಗೆ ಚಿತ್ರಿಸಿದ್ದಾನೆ ?**

(೫) **ಈ ಪದ್ಯದ ತಿರುಳನ್ನು ಸಂಗ್ರಹಿಸಿ ಬರೆಯಿರಿ.**

**ಇದೇ ಭಾವವನ್ನು ವ್ಯಕ್ತಮಾಡುವ ಕೆಳಗಿನ ಹಾಡುಗಳನ್ನು ಓದಿರಿ.**

**ಶ್ರೀ ಗೋಕಾಕರ “ನಾಡಿನಹಾಡು ” ಶ್ರೀ ಮುಗಳಿಯವರ “ಕಾರಣ ಪುರುಷ.**

# ೧೬ ನಾವು ಭಾರತೀಯರು

ಭಾರತೀಯರು ನಾವು ಭಾರತೀಯರು;

ಮಲೆತು ನಿಂತ ವೈರಿಗಳನು
ಗೆಲಿದು ನನ್ನಿ ನಲುಮೆಯಲಿಯೆ
ಚೆಲುವಿನಿಂದೆ ಇಳೆಯನಾಳಿ
ಬಲುಹುಗಾರರೆಂದು ನಲಿದ
ಭಾರತೀಯರು ನಾವು ಭಾರತೀಯರು.

ಭೋಗಗಳಿಗೆ ನೀರನೀಡಿ
ತ್ಯಾಗದಲಿಯೆ ಭೋಗ ನೋಡಿ
ಯೋಗೀಶ್ವರನೊಡನೆ ಬೆರೆಯೆ
ಯೋಗಪಥವ ಕಂಡುಹಿಡಿದ
ಭಾರತೀಯರು ನಾವು ಭಾರತೀಯರು;

ಜಗವೊಡೆಯನ ನೆಲೆಯರಿಯದೆ
ಜಗದ ಜನರ ಜಂಗುಳಿಗಳು
ವಿಗಡವಾಗಿ ತೊಳಲುತಿರಲು
ಬಗೆಯ ಮುಗಿಲೊಳಗೆಯೆ ಕಂಡ
ಭಾರತೀಯರು ನಾವು ಭಾರತೀಯರು;

ಭಾವನೆಗಳ ಕೊಳಲನೂದಿ
ಭಾವರಾಗಗಳನೆ ಹಾಡಿ
ದೇವರಾಯನೊಡನೆ ಆಡಿ
ಸಾವನೋವ ತುಳಿದುನಿಂತ
ಭಾರತೀಯರು ನಾವು ಭಾರತೀಯರು.

— ಆನಂದಕಂದ

# ಪರಿಚಯು

'ಆನಂದಕಂದ' ಎಂಬುದು ಇವರ ಕಾವ್ಯನಾಮ. ಬೆಟಗೇ ಗೇರಿ ಕೃಷ್ಣಶರ್ಮ' ಎಂಬುದು ಇವರ ನಿಜನಾಮ. ಇವರಿಗೆ 'ಕವಿ ಭೂಷಣ' ಎಂದು ಕರೆದು ನಾಡು ತನ್ನ ಮೆಚ್ಚಿಗೆಯನ್ನು ಸೂಚಿ ಸಿದೆ. ಇವರು ಸುಪ್ರಸಿದ್ಧ ಲೇಖಕರೂ, ಉತ್ತಮ ಕವಿಗಳೂ, ಶ್ರೇಷ್ಠ ಕತೆಗಾರರೂ. ಕೀರ್ತಿವೆತ್ತ ಕಾದಂಬರಿ-ಕಾರರೂ ಆಗಿದ್ದಾರೆ.

ಇವರು ಧಾರವಾಡದವರು. ಈಗ ಧಾರವಾಡದಲ್ಲಿ ' ಜಯಂತಿ ' ಎಂಬ ಉತ್ತಮವರ್ಗದವ ಮಾಸಪತ್ರಿಕೆಯನ್ನು ಬಹಳ ದಿನಗಳಿಂದ ನಡೆಸಿಕೊಂಡು ಬರುತ್ತಿದ್ದಾರೆ.

ಪರಭಾಷೆಯ ಪ್ರಭಾವಕ್ಕೆ ಒಳಗಾಗದೇ ಕನ್ನಡದ್ದೇ ಆದ ಒಂದು ಸಹಜ ಸುಂದರವಾದ ಶೈಲಿ ಇವರದಾಗಿದೆ. ಸಣ್ಣ ಕತೆ ಗಳನ್ನು ಬರೆಯುವಲ್ಲಿಯೂ, ಐತಿಹಾಸಿಕ ಕಾದಂಬರಿಗಳ ನಿರ್ಮಿ ತಿಯಲ್ಲಿಯೂ ಇವರಿಗೆ ಹಿರಿಯದಾದ ಸ್ಥಾನವಿದೆ.

ಈ ಮೇಲಿನ "ರಾಷ್ಟ್ರಗೀತ"ವನ್ನು 'ಮಿಂಚಿನಬಳ್ಳಿ' ಯವರು ಪ್ರಕಟಿಸಿದ ' ನಾಡಹಾಡುಗಳ ' ಎಂಬ ಸಂಗ್ರಹದಿಂದ ಆಯ್ದುದೆ.

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

**ಅಭ್ಯಾಸ:—**

(೧) **ಭಾರತೀಯರ ಹಿರಿಮೆಗಳು ಯಾವವು ?**

(೨) **ಭಾರತೀಯರು ಸಾಧಿಸಿದ ಯೋಗಪಥ ಯಾವುದು ?**

(೩) **"ಪಾಶ್ಚಾತ್ಯ ಸಂಸ್ಕೃತಿಯ"ನ್ನು ಕುರಿತು ಬರೆಯಿರಿ.**

(೪) **ಮಿಂಚಿನ ಬಳ್ಳಿಯು "ನಾಡಹಾಡುಗಳು" ಎಂಬ ಗೀತಸಂಗ್ರಹ**

ಸ್ಪಷ್ಟೀಕರಿಸಿರಿ:—

**ದೇವರಾಯನೊಡನೆ ಆಡಿ**

(೧) **ಸಾವನೋವ ತುಳಿದು ನಿಂತ ಭಾರತೀಯ ನಾವು.**

ಕೆಳಗಿನ ಪದಗಳ ರೂಪಸಿದ್ಧಿ ಹೇಳಿರಿ.

**ಬಲಹುಗಾರ, ಮಲೆತು. ಬೆರೆಯೆ.**

ಕೆಳಗಿನ ಸಮಸ್ತ ಪದಗಳನ್ನು ಬಿಡಿಸಿ ಅವುಗಳಗೆ ಹೆಸರು ಹೇಳಿರಿ

**ಯೋಗಪಥ, ಭಾವರಾಗ, ಸಾವನೋವ.**

**ದಲ್ಲಿ ಭಾರತದೇಶದ ವಿಷಯಕ್ಕಿರುವ ಗೀತಗಳನ್ನು ಓದಿರಿ.**

# ೧೭ ತಂಗಿ ಗೌರಮ್ಮನಿಗೆ.

ಜಲದೇವತೆ ವನದೇವತೆ ಒಂದೆಡೆ ಸೇರಿ
ಬಿನದಿಸುತಿಹ ಹೊಳೆ ಮಡುವಿಗೆ ನೀಸೀಸಲು ಹಾರಿ.
ತಾಯೊಡಲನು ಕೂಸಾಟಕೆ ತಾಯ್ಮಡಲಿಗೆ ಬೇರಿ
ತೀರಲು ಜಡವಾಗಳೆ ಕಾವೇರಿಯು ತಂಪೇರಿ.

ನೆನೆದರೆಯೇ ನಾಸಡಗುವೆ ಇದು ಆದುದುದೆಂತೋ!
ಎಲ್ಲಿಂದೀ ಎಳೆ ಜೀವಕೆ ಸಾವೆಂಬುದು ಬಂತೋ!
ಪತಿಯೊಲವಿನ ಸುತನೊಲವಿನ ಕೆಳೆಯೊಲವಿನ ತಂತು
ಜಗ್ಗದೆ ನಿನ್ನನು ಮೇಲಕೆ ನೀ ಮುಳುಗಿದೆಯೆಂತೊ.

ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ
ಮಿಂಚಿದಳೋ ಬಾನಂಚಿಗೆ ಕಾವೇರಿಯ ಕುವರಿ.
ಬೆಳುದಿಂಗಳೆ ಕರುಪಿಟ್ಟಿತೋ ಈ ನಿರ್ಮಲಮೂರ್ತಿ
ಮೊದಲಿಲ್ಲಿಯೆ ಕುಡಿಬಿಟ್ಟಿತು ಮುಗುಳಿಟ್ಟಿತು ಕೀರ್ತಿ.

ಉಷೆ ಸುರಿಸುವ ಇಬ್ಬನಿಯೊಲು ಕರುಣೆಯು ಕಂಬನಿಯ
ಬಾಳ್ ಬಳ್ಳಿಗೆ ಬೀರಿದೆ ನೀ ಮಧುಹಾಸ್ಯದ ಹನಿಯು,

—ಅಂಕಾತನಯ ದತ್ತ.



**ಅಭ್ಯಾಸ:—**

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

[೧] ಗೌರಮ್ಮನು ಈಸಲು ಹೋದ ಹೊಳೆಮಡುವು ಹೇಗಿತ್ತು ?
[೨] ಯಾವ ಶಕ್ತಿಯು ಅವಳನ್ನು ಉಳಿಸಬಹುದಾಗಿತ್ತೆಂದು ಕವಿಯು ಆಶಿಸುತ್ತಾನೆ ? ಮತ್ತು ಅದು ಹೇಗೆ ?
[೩] ಗೌರಮ್ಮನೆಂಬ ಹೆಸರು ಹೇಗೆ ಅನ್ವರ್ಥಕವಾಗಿತ್ತು ?
[೪] ಗೌರಮ್ಮನ ಜೀವವು ಯಾವರೀತಿಯಾಗಿತ್ತು ?
[೫] ಈ ಅಷ್ಟಷಟ್ಪದಿಯಲ್ಲಿ ವ್ಯಕ್ತವಾದ ಭಾವವು ಯಾವದು ?
[೬] ಗೌರಮ್ಮನವರ ಪರಿಚಯಕ್ಕಾಗಿ ಶ್ರೀ ದ. ಬಾ. ಕುಲಕರ್ಣಿ ಇವರು ಬರೆದ "ನಾನು ಕಂಡ ಗೌರಮ್ಮ" ಈ ಚಿಕ್ಕಹೊತ್ತಿಗೆಯನ್ನು ಓದಿರಿ.

[೭] ದಿವಂಗತರಾದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರನ್ನು ಕುರಿತು ಶ್ರೀ ಪರಮೇಶ್ವರರು ಬರೆದ ಅಷ್ಟಷಟ್ಪದಿಯನ್ನು ಓದಿರಿ. ಪ್ರಬುದ್ಧ ಕರ್ನಾಟಕ ಸಂಚಿಕೆ ೪ ಸಂಪುಟ ೨೦. ವರ್ಷ ೧೯೩೯
[೮] ಸಾಲಿರಾಮಚಂದ್ರರಾಯರು ಬರೆದ "ತಿಲಾಂಜಲಿ" ಓದಿರಿ.

ಸ್ಪಷ್ಟೀಕರಿಸಿರಿ.

[೧] ಉಷೆ ಸುರಿಸುವ ಇಬ್ಬನಿಯೊಲು ಕರುಣೆಯ ಕಂಬನಿಯು,
ಬಾಳ್ ಬಳ್ಳಿಗೆ ಬೀರಿದೆ ನೀ ಮಧುಹಾಸ್ಯದ ಹನಿಯು.



## ೧೮ ಕಸ್ಮೈದೇವಾಯ ?

೧

ಅಂದಿನಾ ದೇವರುಗಳೆಲ್ಲ ಮಡಿದುರುಳಿಹರು
ಇಂದ್ರ ವರುಣಾದಿ ಧನದ ಮಿತ್ರ ಪೂಷಣರು—॥
ಸಂದಿದ್ದ ದೈವತ್ವದಗ್ಗಳಿಕೆ ಹೋಗಿಹುದು
ಅಂದಿನವರುನ್ನತಿಯು ಕಳಶ ಕೂಲಿಹುದು. ॥

ಮಾನವರ ಸುಪ್ರಖರ ಮನದ ಮೊನೆಯಲುಗಿನ
ಘಾತದಲಿ ಕಡುನೊಂದು ಸೋಲನೊಪ್ಪಿದರು
ಧ್ಯಾನಪೂಜೆಗಳಿನ್ನು ತಮಗೆ ಸಲ್ಲವು ಎಂದು
ಮಾತಿನೊಪ್ಪಿಗೆಯಿತ್ತು ಶರಣು ಬೇಡಿದರು.

ಅಚ್ಚರಿಯ ಮೋಹದಲಿ ಆಗಸವ ನೋಡುತ್ತೆ
ಉಚ್ಚಕಂಠದಿ ಹಾಡಿದಾ ಭಕ್ತರಳಿದಿಹರು
ನಯದಿಂದ ಭಯದಿಂದಲವರ ನೊಲಿಸುವ ಪಾಡು
ಭೂಮಿಯಿಂದ ಜನದಿಂದ ತೊಲಗಿ ಹೋಗಿಹುದು.

ಸಾಗರನ ಸುರನೀಲ ನೀಲಿಮತೆಯನು ನೋಡಿ
ಘೋರ್ಗರೆಯುತುರ್ಕುವಾರ್ಭಟೆಯ ಕೇಳಿ
ನಾಲ್ದೆಸೆಯೊಳೊಡ್ಡಿರುವಪಾರ ಗಂಭೀರತೆಗೆ
ಬಾಗಿ ಗೈಯುವ ವರುಣ ಪೂಜೆ ಕಾಣಿಸದು.

ನಭದೆಡೆಗೆ ಮೊಗವೆತ್ತಿ ಪೂ-ಪತ್ರವೆರಚುತ್ತೆ
ಕರುಣಿಸೈ ಪರ್ಜನ್ಯ ಎಂಬುದಿಲ್ಲಾಯ್ತು.
ಗುಡುಗು ಗರ್ಜನೆ ಕೇಳಿ ನಡುಗಿ ಬಲಿಯೊಪ್ಪಿಸುತೆ
ಒಡೆಯ ರುದ್ರನ ರೌದ್ರವಿಳಿಪ ಪರಿ ಪೋಯ್ತು.

ಗೋಧನವನುಳುಹೈಯ ಹೆಚ್ಚಿಸೈ ಹೇ ಪೂಷ
ದವಸ ಧಾನ್ಯಗಳೀಯೋ ದೇವ ದೇವೇಶ !
ಧನಕನಕ ವಾಹನವ ಕರುಣಿಸೈ ಧನದ, ಭೋ
ಘನರನರ್ಘರೆ ಎಂಬ ಮೊರೆಯು ಕೇಳಿಸದು.

೨

ಅನ್ಯದೇವರ್ಕಳು ದಾಳಿಟ್ಟರೇರಿದರು
ಸುಮನಸರು ಪರಬ್ರಹ್ಮ ಹರಿ ಹರಾದಿಗಳು
ಇನ್ನೈದು ಸಾವಿರ ವರುಷವಾಳಿದರಿವರು
ಇಂದಿವರ ಆಳಿಕೆಗು ಚ್ಯುತಿಯು ಬಂದಿಹುದು.

ಹಳೆಯ ಕಾಲದ ತಂದೆ ತಾತದಿರ ದೇವರುಗ-
ಳಳಿದು ಹೋಗುವ ಕಡಿದು ಕಾಲ ಬರುತಿಹುದು
ಇಳಿದಿಹುದು ಕಡುನಿಡಿದು ನೆಳಲೊಂದು ಮೇಲಿಂದ
ಅಳಿಸಿ ಹೋಗುತಲಿಹವು ಅವರ ಮೂರ್ತಿಗಳು.

ಪೋಪವರ ಪದವಿಗಳಿಗಿನ್ನಾರು ಬಂದಪರೊ
ಕೋಪಿಗಳೊ ಕರುಣಿಗಳೊ ತಿಳಿಪ ಕೋವಿದರೊ
ಆರನರಸುತೆ ಹೋಗಿ ಹವಿಸನೀಯಲು ಬೇಕೊ
ಆವ ಶೀಲವನವರು ಜಗದಿ ಬಿತ್ತುವರೊ !

ಇಲ್ಲದಿರೆ ಬೇರಾವ ದೇವರೇ ಬಾರರೊ
ಇಲ್ಲವೊಂದಕೆ ಹೆಸರನಿತ್ತು ಕರೆಯುವೆವೊ
ಇಲ್ಲದಿರೆ ಮಾನವನ ಸುಗುಣವೇ ದೈವವೊ
ಎಲ್ಲಿಗೂ ಹರಿಯದಿಹ ಸಂಶಯವೆ ಕೊನೆಯೊ !

—ವೀ. ಸೀ.

# ಪರಿಚಯ

ವಿ. ಸೀತಾರಾಮಯ್ಯ ಎಂಬುದು ಇವರ ಪೂರ್ಣ ಹೆಸರು. ' ವಿ. ಸೀ. ' ಎಂಬುದು ಇವರ ಕಾವ್ಯನಾಮ. ಇವರು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಪ್ರಾಧ್ಯಾಪಕರಾಗಿದ್ದಾರೆ. ಇವರು ಪ್ರತಿಭಾವಂತ ಕವಿಗಳೂ, ವಾಗ್ಮಿಗಳೂ, ಉತ್ತಮ ನಾಟಕಕಾರರೂ, ಕುಶಲರಾದ ಪ್ರಬಂಧ ಲೇಖಕರೂ ಆಗಿದ್ದಾರೆ.

ಸರಳವಾಗಿಯೂ ಉತ್ತಮವಾದ ವಿಚಾರಗಳನ್ನು ಗಂಭೀರವಾಗಿಯೂ ಹೇಳುವರೀತಿ ಇವರದು. ವಿಶಾಲ ಹೃದಯದಂತೆಯೇ ವಿಶಾಲವಾದ ಕಾವ್ಯ ದೃಷ್ಟಿ ಇದೆ. ಇವರು ' ಗೀತಗಳು ' 'ದೀಪಗಳು ' 'ನೆರಳು ಬೆಳಕು ' ಮೊದಲಾದ ಸುಂದರವಾದ ಗೀತ ಸಂಗ್ರಹಗಳನ್ನೂ 'ಆಗ್ರಹ ' ಎಂಬ ನಾಟಕವನ್ನೂ ' ಹಣ ಪ್ರಪಂಚ' ಎಂಬ ಅರ್ಥಶಾಸ್ತ್ರದ ಪುಸ್ತಕವನ್ನೂ 'ಪಂಪಾಯಾತ್ರೆ ' ಎಂಬ ಪ್ರಬಂಧ ಗ್ರಂಥವನ್ನೂ ಬರೆದು ಪ್ರಕಟಿಸಿದ್ದಾರೆ.

ಈಗ ಇವರು ' ಪ್ರಬುದ್ಧ ಕರ್ನಾಟಕ ' ದ ಸಂಪಾದಕರಾಗಿ ಅದರ ಶ್ರೇಯೋಭಿವೃದ್ಧಿಗೆ ಕಾರಣವಾಗುತ್ತಲಿದ್ದಾರೆ.

ಈ ಭಾವಗೀತವನ್ನು ಇವರ 'ಗೀತಗಳು ' ಎಂಬ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ. ಭಾಷೆಯ ಗಾಂಭೀರ್ಯವೂ, ವಿಚಾರದ ಆಳವೂ ಈ ಭಾವಗೀತದಲ್ಲಿ ಸೊಗಸಾಗಿ ತುಂಬಿಕೊಂಡಿದೆ.

**ಅಭ್ಯಾಸಃ—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

**(೧) ಪ್ರಾಚೀನ ಕಾಲದಲ್ಲಿ ಜನರು ಯಾವದೇವತೆಗಳನ್ನು ಪೂಜಿಸುತ್ತಿದ್ದರು ಮತ್ತು ಏಕೆ ?**

**(೨) ಆ ದೇವತೆಗಳನ್ನು ಬಿಟ್ಟು ಬೇರೆ ಯಾವ ದೇವತೆಗಳನ್ನು ಪೂಜಿಸಹತ್ತಿದರು ? ಪ್ರಾಚೀನ ದೇವತೆಗಳಿಗೂ ಇವರಿಗೂ ಯಾವ ಅಂತರ ಕಾಣುವಿರಿ?**

(೩) "ಅಳಿಸಿ ಹೋಗುತಲಿಹವು ಅವರ ಮೂರ್ತಿಗಳು" ಎಂದು ಕವಿಯು ಏಕೆ ಹೇಳುತ್ತಾನೆ ?

(೪) ಮುಂಬರುವ ದೇವತೆಗಳಿಗಾಗಿ ಕವಿಯು ಏಕೆ ಭಯಪಡುವನು?

(೫) "ಕಸ್ಮೈದೇವಾಯ" ಎಂಬ ಹೆಸರನ್ನು ಕವಿಯು ಏಕೆ ಕೊಟ್ಟಿದ್ದಾನೆ ?

ಸ್ಪಷ್ಟೀಕರಿಸಿರಿ.

(೧) ಅಂದಿನವರುನ್ನತಿಯು ಕಳಶ ಕೂಲಿಹುದು.

೨) ಇಳಿದಿಹುದು ಕಡುನಿಡಿದು ನೆಳಲೊಂದು ಮೇಲಿಂದ;
ಅಳಿಸಿ ಹೋಗುತಲಿಹವು ಅವರ ಮೂರ್ತಿಗಳು.

(೩) ಆದನರಸುತಹೋಗಿ ಹವಿಸನೀಯಲು ಬೇಕು ?

(೪) ಎಲ್ಲಿಗೂ ಹರಿಯದಿಹ ಸಂಶಯವೇ ಕೊನೆಯೊ !



# ಶುದ್ಧಾಶುದ್ಧ ಪತ್ರಿಕೆ



## ಗದ್ಯಭಾಗ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೮ | ೧೮ | ತೊಡದವು. | ತೊಡಗಿದವು. |
| ೧೭ | ೯ | ಬಂದಿದದ್ದರು | ಬಂದಿದ್ದರು |
| ೨೨ | ೨೦ | ಏಕಾಂತ | ಏಕಾಂಕ |
| ೨೪ | ೧ | ಮಾರಯ್ಯಲ್ | ಮಾರಯಲ್ |
| ೩೭ | ೧೭ | ಬಳ್ಳೇಗಾವಿಯ | ಬಳ್ಳೇಗಾವಿಯು |
| ೩೫ | ೧೩ | ಬೈದರು | ಬೈದರು. |
| ೩೬ | ೧೩ | ಅ ತೂತಿನೊಳಗಿಂದ | ಆ ತೂತಿನೊಳಗಿಂದ |
| ” | ೨೩ | ದ್ರಶ್ಯ | ದೃಶ್ಯ |
| ೪೨ | ೩ | ಪ್ರರ್ವತಕ | ಪ್ರವರ್ತಕ |
| ೪೩ | ೭ | ಲೇಖರು | ಲೇಖಕರು |
| ೪೪ | ೧೫ | ಹೊರಿಸಿಕೊಂಡ | ಹೊರಿಸಿಕೊಂಡು |
| ೪೬ | ೧ | ಕನ್ನಡಸಾಹಿತ್ಯಕ್ಕೆ | ಕನ್ನಡಗದ್ಯಸಾಹಿತ್ಯಕ್ಕೆ |
| ೪೭ | ೧ | ಕಶಲ | ಕುಶಲ |
| ” | ೨ | ಪಣ್ಯದ | ಪುಣ್ಯದ |
| ೪೮ | ೧೪ | ಬಾಳ್ಕೆಯೇನಿಮಿತ | ಬಾಳ್ಕೆಯೇನಮಿತ |
| ೫೧ | ೧೧ | ಮನ ಮಂದೋ | ಮನ ಮುಂದೋ |
| ೫೨ | ೯ | ಸಾಧಿಸ್ಥಿದವಳು | ಸಾಧಿಸಿದಳವಳು |
| ” | ೨೨ | ವಾಯಿಸುತ | ವಾಯುಸುತ |
| ೬೦ | ೫ | ಮುಟ್ಟುವಾಗ | ಮುಚ್ಚುವಾಗ |
| ೬೯ | ೩ | ಜನಾರ್ಧನ | ಜನಾರ್ದನ |
| ” | ೯ | ತಮಂಥ | ತಮಂಥ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೭೬ | ೧೧ | ಮುಟ್ಟ | ಮುಟ್ಟಿ |
| ೭೮ | ೧೭ | ನಿರ್ಣಸಿರೆ | ನಿರ್ಣಯಿಸಿರೆ |
| ೭೯ | ೧೧ | ಶೂನ್ಯಮನಸ್ಥಸ | ಶೂನ್ಯಮನ್ಕ |
| ” | ೨೪ | ಟ್ಟು ಸಿರೆಳಿದು | ನಿಟ್ಟುಸಿರೆಳಿದು |
| ೮೨ | ೬ | ಮನಸ್ಸು | ಮನಸ್ಸಿನ |
| ೮೮ | ೯ | ಅವರಿಬ್ಬರೂ | ಅವರಿಬ್ಬರಿಗೂ |
| ೯೩ | ೫ | ಎಂದನು | ಎಂದೆನು |
| ೯೬ | ೧೬ | ಭಪ್ಕನ್ಸೈವತ್ತಾರು | ಭಪ್ಪನ್ನೈವತ್ತಾರು |
| ೯೮ | ೨೦ | ಹಾಕ್ಸಿಡು | ಹಾಕ್ಬಿಡು |
| ೧೦೫ | ೭ | ಯಸ್ನು | ೮ನೆಯ ಸಾಲಿನ ಮೊದಲ ಶಬ್ದ - ಸಂಶೋಧನೆ - ಇದಕ್ಕೆ ಜೋಡಿಸಬೇಕು. |
| ೧೦೯ | ೧೮ | ಅವೆ | ಅವ |
| ೧೧೦ | ೨ | ಸೆರಿಸು | ಸ್ಪೈರಿಸು |
| ” | ೧೯ | ಅವಭೃಥ | ಅವಭೃತ |
| | | **ಪದ್ಯಭಾಗ** | |
| ೨ | ೩ | ಭಯುಥಕ್ತಿಯಿಂ | ಭಯುಭಕ್ತಿಯಿಂ |
| ” | ೧೨ | ಕೈಮುದಿರ್ದು | ಕೈಮುಗಿದಿರ್ದು |
| ” | ೧೪ | ಆರೊಗಿಸಲೆ | ಆರೋಗಿಸೆಲೆ |
| ೪ | ೨೭ | ಗರಳೆ | ರಗಳೆ |
| ೬ | ೪ | ನಿಗುರ್ಣ | ನಿರ್ಗುಣ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೯ | ೬ | ಯಿಂಟ್ಟಿಂತು | ಯಿಟ್ಟಿಂತು |
| ೧೧ | ೨೩ | = ಸುಂದರಿ | ನೀರೆ = ಸುಂದರಿ |
| ೧೭ | ೭ | ಬೆಸಗೊಂಡಾ | ಬೆಸಗೊಂಡೊಡಾ |
| ೨೦ | ೨೧ | ನಾಚಿಸಿದೆ | ನಾಚಿಸದೆ |
| ೨೩ | ೮ | ನಿಂತೆಂದದು | ನಿಂತೆಂದನು |
| ೨೪ | ೧ | ಆತ್ಮಜವ | ಆತ್ಮಜನ |
| ೩೨ | ೧೯ | ನಡಿಯಲಮ್ಮೆನು | ನುಡಿಯಲಮ್ಮೆನು |
| ” | ೨೫ | ಜನಿರ್ಸಿ | ಜನಿಸಿ |
| ೪೨ | ೧೮ | ಸಾದುರ್ದು | ಸಾರ್ದುದು |
| ೪೭ | ೨೧ | ಕೆಲಕ್ಕೊರಲೆದ | ಕೆಲಕ್ಕೊಲೆದ |
| ೬೯ | ೧ | ಪ್ರಸಾದ | ಪ್ರಾಸದ |
| ” | ೨ | ಪ್ರಾಸಾದ | ಪ್ರಾಸದ |
| ೭೭ | ೧೮ | ದರಿಯಿತ್ತುಲುತುಂಗ | ವರಿಯಿತ್ತುಲುತ್ತುಂಗ |
| ” | ೧೯ | ಸೊಗಯಿಸುವು | ಸೊಗಯಿಸುವ |
| ೭೮ | ೧೮ | ನೆಳದು | ನೆಂದು |
| ೮೫ | ‘ಅಭ್ಯಾಸ’ ಭಾಗದಲ್ಲಿಯ ೪ ನೆಯ ಸಾಲನ್ನು ಕೊನೆಯ ಸಾಲಿನೊಡನೆ ಕೂಡಿಸಿ ಓದಬೇಕು. | | |

**ಅರಿಕೆ—** ಕೆಲ ಹ್ರಸ್ವ ದೀರ್ಘಗಳ ದೋಷಗಳು ಅನಿವಾರ್ಯವಾಗಿ ಉಳಿದುದಕೆ ವಿಷಾದಪಡುತ್ತೇವೆ.